CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಮಾರ್ಚ್ ೪, ೨೦೦೪ (ಫಾಲ್ಗುಣ ೧೪, ಶಕ ವರ್ಷ ೧೯೨೫) | ಸಂಚಿಕೆ ೧೦ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರ್ಥಿಕ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಆಇ 4 ಟಿಸಿಇ 2003, ಬೆಂಗಳೂರು, ದಿನಾಂಕ: 28ನೇ ಜನವರಿ 2004**

**ವಿಷಯ:** ರಾಜ್ಯ ಸರ್ಕಾರದ ಗ್ರೂಪ್-ಡಿ ನೌಕರರಿಗೆ ಸಮವಸ್ತ್ರ ಸರಬರಾಜು ಮಾಡುವ ಬಗ್ಗೆ ತಿದ್ದುಪಡಿ.

ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 4 ಟಿಸಿಇ 92, ದಿನಾಂಕ: 30.7.1992 ರಲ್ಲಿನ ಆದೇಶ ಭಾಗದ ಕಂಡಿಕೆ 3 ರಲ್ಲಿನ ಜರಿಯುಳ್ಳ ಶ್ಯಾಮಲ ಕುಲ್ಲಾ ಪೇಟಾ ಮತ್ತು ಟೊಪ್ಪಿಗೆಗಳನ್ನು ಎಂಬುದಕ್ಕೆ ಬದಲಾಗಿ ಮೈಸೂರು ಜರೀ ಪೇಟ ಎಂಬುದಾಗಿ ಓದಿಕೊಳ್ಳತಕ್ಕದ್ದು. ಅಧಿಕ ವೆಚ್ಚವಾಗದಂತೆ ಷರತ್ತುಗೊಳಪಟ್ಟು ಆಡಳಿತ ಇಲಾಖೆಗಳು ಪರಿಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಸೂರಿಬಾಬು**

ಪಿ.ಆರ್. 87

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆ.ನಿ. ಮತ್ತು ಬಿಸಿಸಿ).

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಸಿಐ:193:ಎಸ್‌ಜಿಎಫ್:94(ಭಾ), ಬೆಂಗಳೂರು, ದಿನಾಂಕ: 2ನೇ ಜನವರಿ 2004**

ಸರ್ಕಾರದ ಆದೇಶ ಸಂಖ್ಯೆ: ಸಿಐ:193:ಎಸ್‌ಜಿಎಫ್:94 (ಭಾಗ), ದಿನಾಂಕ: 8.10.2003ರ ಆದೇಶದ ಭಾಗದ ಕ್ರಮಸಂಖ್ಯೆ:6ನ್ನು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

(ಅ) ಮೇಲೆ ವಿವರಿಸಿದಂತೆ ಸರ್ಕಾರದಿಂದ ಮುಂದೆ ಬಿಡುಗಡೆಯಾಗುವ ಹಣವನ್ನು ಈಗಾಗಲೇ ಆದೇಶಿಸಿರುವಂತೆ ಹಣ ಸಂದಾಯ ರಸೀದಿ ಮೇಲೆ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಮೇಲು ರುಜು ಪಡೆದು ಖಜಾನೆಯಿಂದ ಸೆಳೆಯುವ ಅಧಿಕಾರವನ್ನು ನಿರ್ದೇಶಕರು ಕರ್ನಾಟಕ ಸಕ್ಕರೆ ಸಂಸ್ಥೆ ಇವರಿಗೆ ನೀಡಿದ್ದು ಹಾಗೂ ಸಕ್ಕರೆ ಕಾರ್ಖಾನೆಗಳು ನುರಿಸಿದ ಪ್ರತಿ ಟನ್‌ಗೆ ರೂ.2.00 ರಂತೆ ಸಂಗ್ರಹವಾದ ಹಣವನ್ನು ಸಕ್ಕರೆ ಸಂಸ್ಥೆಯ ಛೇರ್ಮನ್ ಹಾಗೂ ಕಾರ್ಯದರ್ಶಿಗಳು (ಡೈರೆಕ್ಟರ್) ಕರ್ನಾಟಕ ಸಕ್ಕರೆ ಸಂಸ್ಥೆ ಇವರ ಹೆಸರಿನಲ್ಲಿ ಒಂದು ಜಂಟಿ ಬ್ಯಾಂಕ್ ಖಾತೆಯನ್ನು ತೆರೆದು ಜಮಾ ಮಾಡಲು ಅನುಮತಿಸಿದೆ ಮತ್ತು ಈ ಹಣದ ಉಪಯೋಗವನ್ನು ಈ ಆದೇಶದ ಪುಟ 3-4 ರಲ್ಲಿ ಐಟಂ 1 ರಿಂದ 7 ರವರೆಗೆ ಹೇಳಿದ ಚಟುವಟಿಕೆಗಳಿಗೆ ಮಾತ್ರ ಸೀಮಿತಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪಿ.ಆರ್. 93

ಪೀಠಾಧಿಕಾರಿ (ಐಡಿ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಕಂದಾಯ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಆರ್‌ಡಿ 96 ಎಲ್‌ಆರ್‌ಎಂ 2003 ಭಾಗ, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್ 2003**

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 96 ಎಲ್‌ಆರ್‌ಎಂ 2003,** ದಿನಾಂಕ: 27.8.2003ರ ಆದೇಶದ ಮೂರನೇ ಸಾಲಿನಲ್ಲಿ "ಸಾರ್ವಜನಿಕ ಉದ್ದೇಶಕ್ಕಾಗಿ" ಎಂಬ ಪದಗಳ ಬದಲಾಗಿ "ಸರ್ಕಾರಿ ಶಾಲೆಗಾಗಿ ಶಿಕ್ಷಣ ಇಲಾಖೆಗೆ" ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಧಾಕೃಷ್ಣ**

ಪಿ.ಆರ್. 94 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ).

## ನಗರಾಭಿವೃದ್ಧಿ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ನಅಇ 83 ನಯೋಸೇ 2003, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2003**

ಅಧಿಸೂಚನೆ ಸಂಖ್ಯೆ: ನಅಇ 83 ನಯೋಸೇ 2003, ದಿನಾಂಕ: 16.7.2003ರ ಮೂರನೇ ಸಾಲಿನಲ್ಲಿ "ದಿನಾಂಕ: 1.4.2001 ರಿಂದ 31.5.2002" ರವರೆಗೆ ಎಂಬುದರ ಬದಲಾಗಿ "ದಿನಾಂಕ: 1.4.2001 ರಿಂದ 31.5.2001" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ರಂಗನಾಥ್**

ಪಿ.ಆರ್. 95 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ:** ಸರ್ಕಾರದ ಅನುದಾನಿತ ಖಾಸಗಿ ಪ್ರಾಥಮಿಕ, ಪ್ರೌಢ ಮತ್ತು ಪದವಿಪೂರ್ವ ಕಾಲೇಜುಗಳ ಬೋಧಕ ಸಿಬ್ಬಂದಿ ನೇಮಕಾತಿಗೆ ಅನುಮೋದನೆ ಮಾಡುವ ಅಧಿಕಾರ ಪ್ರತ್ಯಾಯೋಜನೆಯನ್ನು ಹಿಂತೆಗೆದುಕೊಳ್ಳುವ ಬಗ್ಗೆ.

**ಓದಲಾಗಿದೆ:** ದಿನಾಂಕ: 31.1.1995ರ ಸರ್ಕಾರದ ಆದೇಶ ಸಂಖ್ಯೆ: ಇಡಿ 450 ಎಸ್‌ಇಪಿ 92.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಸರ್ಕಾರದ ಅನುದಾನಿತ ಖಾಸಗಿ ಪ್ರಾಥಮಿಕ ಪ್ರೌಢ ಮತ್ತು ಪದವಿ ಪೂರ್ವ ಕಾಲೇಜುಗಳಲ್ಲಿನ ಅನುದಾನಿತ ಹುದ್ದೆಗಳಿಗೆ ಬೋಧಕ ಸಿಬ್ಬಂದಿಯ ನೇಮಕಾತಿಯನ್ನು ಅನುಮೋದಿಸುವ ಅಧಿಕಾರಕ್ಕೆ ಸಂಬಂಧಿಸಿದಂತೆ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಸೂಚಿಸಿದ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ಇಲಾಖೆಯಿಂದ ಯಾವುದೇ ರೀತಿಯ ಸಹಮತಿ ನೀಡಿರುವುದಿಲ್ಲ. ಅಂತೆಯೇ ಸಹಯಾನುದಾನಿತ ವಿಷಯದಲ್ಲಿ ಅಧಿಕಾರ ಪ್ರತ್ಯಾಯೋಜನೆಯು ಆರ್ಥಿಕ ಪರಿಸ್ಥಿತಿಯ ಮೇಲೆ ಪರಿಣಾಮ ಬೀರುವುದರಿಂದ ಸದರಿ ಅಧಿಕಾರವನ್ನು ಸರ್ಕಾರದಲ್ಲಿಯೇ ಉಳಿಸಿಕೊಳ್ಳ ಬೇಕಾಗಿರುತ್ತದೆ. ಆದ ಕಾರಣ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 2 ಟಿಎಫ್‌ಪಿ 2004, ಬೆಂಗಳೂರು, ದಿನಾಂಕ: 17ನೇ ಜನವರಿ 2004**

ಸರ್ಕಾರದ ಅನುದಾನಿತ ಖಾಸಗಿ ಪ್ರಾಥಮಿಕ, ಪ್ರೌಢ ಮತ್ತು ಪದವಿ ಪೂರ್ವ ಕಾಲೇಜುಗಳಲ್ಲಿನ ಅನುದಾನಿತ ಹುದ್ದೆಗಳಿಗೆ ಬೋಧಕ ಸಿಬ್ಬಂದಿಯ ನೇಮಕಾತಿಯನ್ನು ಅನುಮೋದಿಸುವ ಅಧಿಕಾರಕ್ಕೆ ಸಂಬಂಧಿಸಿದಂತೆ ದಿನಾಂಕ: 31.1.95ರ ಇಡಿ 450 ಎಸ್‌ಇಪಿ 92 ಕ್ರಮಾಂಕದ ಆದೇಶದಲ್ಲಿ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಲಾಗಿದ್ದ ಅಧಿಕಾರವನ್ನು ಮತ್ತು ತತ್ಸಂಬಂಧ ಇತರ ಯಾವುದೇ ಪ್ರತ್ಯಾಯೋಜಿತ ಅಧಿಕಾರಗಳು ಚಾಲ್ತಿಯಲ್ಲಿದ್ದಾಗ್ಯೂ ಕೂಡ ಈ ಎಲ್ಲಾ ಪ್ರತ್ಯಾಯೋಜಿತ ಅಧಿಕಾರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂತೆಗೆದುಕೊಳ್ಳಲಾಗಿದೆ. ಅಲ್ಲದೆ ಇನ್ನು ಮುಂದೆ ಸದರಿ ನಿಯಮ / ಆದೇಶಗಳಡಿ ಯಾವುದೇ ನೇಮಕಾತಿ ಮಾಡುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಸೂರಿ ಬಾಬು**

ಪಿ.ಆರ್. 97 ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆರ್ಥಿಕ ನಿಯಮಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ.ಟಿ. ವಿಜಯ ರಾಜ್ ಅರಸ್, ನಿವೃತ್ತ ಅಧೀನ ಕಾರ್ಯದರ್ಶಿ ಕರ್ನಾಟಕ ಸರ್ಕಾರದ ಸಚಿವಾಲಯ, ಅವರ ವಿರುದ್ಧದ ಇಲಾಖಾ ವಿಚಾರಣೆ - ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಕ್ರಮಾಂಕ: ಸಿಆಸುಇ 24 ಎಸ್‌ಇಎನ್ 02, ದಿನಾಂಕ: 31.01.2003.
2) ವಿಚಾರಣಾ ವರದಿ ಕ್ರಮಾಂಕ: ಸಂವ್ಯಶಾಇ 73 ಉಕಾ-1:2003, ದಿನಾಂಕ: 01.07.2003.
3) ನೋಟೀಸ್ ಕ್ರಮಾಂಕ: ಸಿಆಸುಇ 24 ಎಸ್‌ಇಎನ್ 2002, ದಿನಾಂಕ: 21.08.2003.
4) ಶ್ರೀ ಕೆ.ಟಿ. ವಿಜಯರಾಜ್ ಅರಸ್, ನಿವೃತ್ತ ಅಧೀನ ಕಾರ್ಯದರ್ಶಿ, ಅವರ ಉತ್ತರ ದಿನಾಂಕ: 05.11.03.
5) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಅವರ ಪತ್ರದ ಕ್ರಮಾಂಕ: ಜಿಎಸ್‌ಸಿ 148 ಸಿಎನ್‌ಎಸ್ 2003, ದಿನಾಂಕ: 31.12.2003.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕೆಲವೊಂದು ಅವಧಿಗೆ ಅನಧಿಕೃತವಾಗಿ ಕಛೇರಿ ಕೆಲಸಕ್ಕೆ ಗೈರು ಹಾಜರಾದ ಆರೋಪಕ್ಕಾಗಿ ಶ್ರೀ ಕೆ.ಟಿ. ವಿಜಯ ರಾಜ್ ಅರಸ್ ನಿವೃತ್ತ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ವಿರುದ್ಧ ಮೇಲೆ (1) ರಲ್ಲಿ ಓದಲಾದ ದಿನಾಂಕ: 31.01.2003ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಬಿ.ಬಿ. ಪತ್ತಾರ್, ಸರ್ಕಾರದ ಉಪ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 01.07.2003ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತು ಈ ಮುಂದಿನ ನಿರ್ಣಯ ನೀಡಿದರು.

ಶ್ರೀ ಕೆ.ಟಿ. ವಿಜಯ ರಾಜ್ ಅರಸ್, ನಿವೃತ್ತ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರು ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ 2000ನೇ ಸಾಲಿನ ಮೇ (4 ದಿನ) ಆಗಸ್ಟ್ (4 ದಿನ) ಸೆಪ್ಟೆಂಬರ್ (1 ದಿನ) ನವೆಂಬರ್ (4 ದಿನ) ಡಿಸೆಂಬರ್ (8 ದಿನ) ಹಾಗೂ 2001ನೇ ಸಾಲಿನ ಜನವರಿ (7 ದಿನ) ಫೆಬ್ರವರಿ (4 ದಿನ) ಮಾರ್ಚ್ (1 ದಿನ) ಏಪ್ರಿಲ್ (2 ದಿನ) ನವೆಂಬರ್ (4 ದಿನ) ಡಿಸೆಂಬರ್ (3 ದಿನ) ತಿಂಗಳಲ್ಲಿ ಒಟ್ಟು 42 ದಿನಗಳು ಗೈರು ಹಾಜರಾಗಿದ್ದಾರೆ. ಒಂದು ದಿನಕ್ಕೆ ಮಾತ್ರ ಸಾಂದರ್ಭಿಕ ರಜೆ ಕೋರಿ ಅರ್ಜಿ ಸಲ್ಲಿಸಿದ್ದಾರೆ. ರಜೆಗಾಗಿ ಸಲ್ಲಿಸಿದ ರಜಾ ಅರ್ಜಿ ಮಂಜೂರಾಗಿದೆಯೇ ಇಲ್ಲವೇ ಎಂಬುದನ್ನು ಖಚಿತಪಡಿಸಿಕೊಂಡು ರಜೆಯ ಮೇಲೆ ತೆರಳಬೇಕಿತ್ತು. ಕನಿಷ್ಟ ಮೊದಲು ಹೋದ ರಜೆಯ ಅವಧಿ ಮುಗಿದ ನಂತರವಾದರೂ ಮತ್ತೊಮ್ಮೆ ರಜೆ ಅರ್ಜಿ ಸಲ್ಲಿಸುವ ಮೊದಲು ಮೊದಲನೆ ರಜೆಯ ಮಂಜೂರಾತಿ ಖಚಿತಪಡಿಸಿಕೊಂಡು ತದನಂತರ ಮತ್ತೊಂದು ಅವಧಿಗೆ ರಜೆಯನ್ನು ಕೋರಬಹುದಾಗಿತ್ತು. ಇದರಿಂದಾಗಿ ಆಪಾದಿತ ನೌಕರರು ರಜೆಯ ಮಂಜೂರಾತಿ ವಿಷಯದಲ್ಲಿ ಉದಾಸೀನ ಧೋರಣೆ ತಳೆದಿರುವುದಾಗಿ ಸ್ಪಷ್ಟವಾಗುತ್ತದೆ. ಅವರು ರಾಜ್ಯ ಪತ್ರಾಂಕಿತ 'ಎ' ದರ್ಜೆಗೆ ಸೇರಿದ ಅಧಿಕಾರಿ ಯಾದ್ದರಿಂದ ಮೇಲಿಂದ ಮೇಲೆ ರಜೆ ಹೋಗುವುದರಿಂದ ಸರ್ಕಾರದ ಕೆಲಸದಲ್ಲಿ ಆಗುವ ಪರಿಣಾಮಗಳ ಮಾಹಿತಿ ಗೊತ್ತಿದ್ದರೂ ಸಹ ಮೇಲಿಂದ ಮೇಲೆ ರಜೆ ಹೋಗುವ ಪರಿಪಾಠ ಇಟ್ಟುಕೊಂಡಿರುವುದಾಗಿ ಕಂಡು ಬರುತ್ತದೆ. ರಜೆ ಅರ್ಜಿಯಲ್ಲಿ ಅನಾರೋಗ್ಯದ ಕಾರಣ ನಮೂದಿಸಿದ್ದರೂ ಸೂಕ್ತ ವೈದ್ಯಕೀಯ ದಾಖಲೆಗಳಿಲ್ಲದ ಪ್ರಯುಕ್ತ ನೀಡಿದ ಅರ್ಜಿ ಮತ್ತು ಇತರೆ ದಾಖಲಾತಿಗಳಿಂದ ಆಪಾದಿತ ಅಧಿಕಾರಿಯು ಗೈರು ಹಾಜರಾಗಿರುವುದು ಮನಗಾಣಬಹುದಾಗಿದ್ದು ಇದರಿಂದಾಗಿ ಮೊದಲನೇ ಆರೋಪದ ಮೇಲಿನ ಭಾಗವು ಸಾಬೀತಾಗಿದೆ. ಅನಧಿಕೃತ ಗೈರು ಹಾಜರಿಯ ಪ್ರಯುಕ್ತ ಶಾಖೆಯ ಕೆಲಸ ಕಾರ್ಯಗಳು ಅಸ್ತವ್ಯಸ್ತಗೊಂಡಿರುವುದು ಕಂಡು ಬರುತ್ತದೆ. ಅವರಿಗೆ ಮೇಲಾಧಿಕಾರಿಗಳು ಸ್ಪಷ್ಟ ಸೂಚನೆಗಳನ್ನು ನೀಡಿದ್ದರೂ ಸಹಾ ಅವುಗಳನ್ನು ಪಾಲಿಸದೇ ಕಡತಗಳನ್ನು ಬಾಕಿ ಇಟ್ಟುಕೊಂಡು ವಿಳಂಬಕ್ಕೆ ಕಾರಣರಾಗಿರುತ್ತಾರೆ. ದಿನಾಂಕ: 23.09.2001 ರಂದು ಕಳುಹಿಸಲಾಗಿದ್ದ ಕಡತವನ್ನು ಆಪಾದಿತ ನೌಕರರು ದಿನಾಂಕ: 10.12.2001 ರಂದು ಸದರಿ ಕಡತವನ್ನು ಪೀಠಾಧಿಕಾರಿಯವರಿಗೆ ಕಳುಹಿಸಿರುವುದಾಗಿ ತಿಳಿದು ಬರುತ್ತದೆ. ಸದರಿ ಕಡತದಲ್ಲಿಯ ಕಂಡಿಕೆ 281 ರಲ್ಲಿ ಪ್ರತಿಯೊಂದು ಅಂಶಗಳ ಬಗ್ಗೆ ದಿನಾಂಕ: 26.09.2001 ರಂದು ಸಾಯಂಕಾಲ ಚರ್ಚಿಸಲು ಉಪ ಕಾರ್ಯದರ್ಶಿಯವರು ಸೂಚಿಸಿದ್ದರೂ ಸಹಾ ಮೇಲಾಧಿಕಾರಿಗಳ ಆದೇಶವನ್ನು ಪಾಲಿಸಲು ವಿಫಲರಾಗಿರುತ್ತಾರೆ 2ನೇ ಆರೋಪ ಸಾಬೀತಾಗಿದೆ.

ವಿಚಾರಣೆ ಪ್ರಗತಿಯಲ್ಲಿದ್ದಾಗ ಶ್ರೀ ಕೆ.ಟಿ. ವಿಜಯರಾಜ್ ಅರಸ್, ಅಧೀನ ಕಾರ್ಯದರ್ಶಿಯವರು ದಿನಾಂಕ: 31.01.2003 ರಂದು ಸೇವೆಯಿಂದ ವಯೋ ನಿವೃತ್ತಿ ಹೊಂದಿದರು ವಿಚಾರಣಾ ವರದಿಯನ್ನು ಪರಿಶೀಲಿಸಲಾಯಿತು. ಹಾಗೂ ಶ್ರೀ ಕೆ.ಟಿ. ವಿಜಯ ರಾಜ್ ಅರಸ್ ನಿವೃತ್ತ ಅಧೀನ ಕಾರ್ಯದರ್ಶಿ ಅವರಿಗೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 21.08.2003ರ ಎರಡನೇ ನೋಟೀಸ್ ನೀಡಿ ಸಾಬೀತಾದ ಆರೋಪಗಳಿಗಾಗಿ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ 300-00 ರೂಪಾಯಿಗಳನ್ನು ಒಂದು ವರ್ಷದ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ಏಕೆ ವಿಧಿಸಬಾರದೇಕೆಂಬುದಕ್ಕೆ ಸಮಜಾಯಿಷಿ ಕೇಳಲಾಯಿತು. ಶ್ರೀ ಕೆ.ಟಿ. ವಿಜಯ ರಾಜ್ ಅರಸ್ ನಿವೃತ್ತ ಅಧೀನ ಕಾರ್ಯದರ್ಶಿಯವರು ಮೇಲೆ (4) ರಲ್ಲಿ ಓದಲಾದ ದಿನಾಂಕ: 05.11.2003ರ ಉತ್ತರ ಸಲ್ಲಿಸಿ, ವಿಚಾರಣೆಯಲ್ಲಿ ತಮ್ಮ ಪರವಾಗಿ ಮಂಡಿಸಿದ ವಾದಗಳನ್ನು ಪರಿಗಣನೆಗೆ ತೆಗೆದುಕೊಳ್ಳದಿರುವುದು ದುರದೃಷ್ಟಕರ. ಅನಾರೋಗ್ಯದಿಂದ ತಮಗಾದ ತೊಂದರೆಗಳ ಬಗ್ಗೆ ನೀಡಲಾದ ಯಾವುದೇ ದಾಖಲೆಗಳನ್ನು ವಿಚಾರಣಾಧಿಕಾರಿಯು ಪರಿಗಣಿಸಿಲ್ಲ. ತಮ್ಮ ಲೆಕ್ಕದಲ್ಲಿ ಸಾಕಷ್ಟು ರಜೆಗಳು ಇದ್ದಾಗ್ಯೂ ಅದನ್ನು ಪರಿಗಣಿಸದೇ ಸದರಿ ಅವಧಿಯ ವೇತನವನ್ನು ಮಾಡಿಕೊಟ್ಟಿರುವುದಿಲ್ಲ. ಮತ್ತು ಡಯಾಬಿಟೀಸ್ ಹಾಗೂ ಕೆಲವು ದೀರ್ಘ ಒತ್ತಡ ಖಾಯಿಲೆಗಳಿಂದ ನರಳುತ್ತಿದ್ದು, ಆರ್ಥಿಕ ದುಃಸ್ಥಿತಿಯಿಂದ ನರಳುತ್ತಿರುವ ಕಾರಣ ಎಲ್ಲಾ ಅಂಶಗಳನ್ನು ಪರಿಗಣಿಸಿ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

ಆರೋಪಿತ ನಿವೃತ್ತ ಅಧಿಕಾರಿಯ ಉತ್ತರವನ್ನು ವಿಚಾರಣಾ ವರದಿ ಹಾಗೂ ದಾಖಲೆಗಳೊಡನೆ ಪರಿಶೀಲಿಸಲಾಗಿ ತೀವ್ರ ತರವಾದ ಉದಾಸೀನತೆಯಿಂದ ವರ್ತಿಸಿದ ಆರೋಪಗಳಾಗಿದ್ದು ರಜೆ ಅರ್ಜಿಯಲ್ಲಿ ಅನಾರೋಗ್ಯದ ಕಾರಣ ನಮೂದಿಸಿದ್ದರೂ ಸೂಕ್ತ ವೈದ್ಯಕೀಯ ದಾಖಲೆಗಳನ್ನು ಒದಗಿಸಿರುವುದಿಲ್ಲ. ರಾಜ್ಯ ಪತ್ರಾಂಕಿತ 'ಎ' ದರ್ಜೆಗೆ ಸೇರಿದ ಅಧಿಕಾರಿಯಾಗಿದ್ದುಕೊಂಡು ಮೇಲಿಂದ ಮೇಲೆ ರಜೆ ಹೋಗುವುದರಿಂದ ಸರ್ಕಾರದ ಕೆಲಸದಲ್ಲಿ ಆಗುವ ಪರಿಣಾಮಗಳ ಮಾಹಿತಿ ಹೊಂದಿದ್ದರೂ ಸಹ ಮೇಲಿಂದ ಮೇಲೆ ರಜೆ ಹೋಗುವ ಪರಿಪಾಠ ಇಟ್ಟುಕೊಂಡಿರುವುದಾಗಿ ಕಂಡು ಬರುತ್ತದೆ. ರಜಾ ಅರ್ಜಿ ಮಂಜೂರಾಗಿದೆಯೋ ಇಲ್ಲವೇ ಎಂಬುದನ್ನು ಖಚಿತ ಪಡಿಸಿಕೊಂಡು ರಜೆಯ ಮೇಲೆ ತೆರಳಬೇಕಾಗಿತ್ತು. ಕನಿಷ್ಟ ಮೊದಲು ಹೋದ ರಜೆಯ ಅವಧಿ ಮುಗಿದ ನಂತರವಾದರೂ ಮತ್ತೊಮ್ಮೆ ರಜೆ ಅರ್ಜಿ ಸಲ್ಲಿಸುವ ಮೊದಲು ಮೊದಲನೇ ರಜೆ ಮಂಜೂರಾತಿ ಖಚಿತಪಡಿಸಿಕೊಂಡು ತದನಂತರ ಮತ್ತೊಂದು ಅವಧಿಗೆ ರಜೆಯನ್ನು ಕೋರಬಹುದಾಗಿತ್ತು. ಇದರಿಂದಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಆಗದಿದ್ದರೂ ಸಹ ಈ ಪ್ರಕರಣದಲ್ಲಿ ಆರೋಪಿತರು ಎಸಗಿರುವ ದುರ್ನಡತೆ,

ನಿರ್ಲಕ್ಷತೆ ಅಳಿಸಿ ಹೋಗುವುದಿಲ್ಲವಾದ್ದರಿಂದ, ವಿಚಾರಣಾ ವರದಿಯಲ್ಲಿನ ಈ ಅಂಶಕ್ಕೆ ತಕ್ಕ ಸಮಾಧಾನವನ್ನು ಆರೋಪಿಯು ನೀಡುವುದೇ ಇಲ್ಲ. ವಿಚಾರಣಾ ವರದಿಯು ತಿಳಿಸುವಂತೆ ಇವುಗಳು ಸಾಬೀತಾದ ಆರೋಪಗಳಾಗಿಯೇ ಉಳಿದಿವೆ. ಆದ್ದರಿಂದ ಶ್ರೀ ಕೆ.ಟಿ. ವಿಜಯ ರಾಜ್ ಅರಸ್, ನಿವೃತ್ತ ಅಧೀನ ಕಾರ್ಯದರ್ಶಿ, ಅವರ ಉತ್ತರವನ್ನು ಒಪ್ಪದೇ ಆರೋಪ ಸಾಬೀತಾಗಿವೆಯೆಂಬ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 22ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಕೆ.ಟಿ. ವಿಜಯ ರಾಜ್ ಅರಸ್, ನಿವೃತ್ತ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ 300-00 ರೂಪಾಯಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 98 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಂ.ಪಿ. ವರದರಂಗಯ್ಯ, ಗ್ರಾಮಲೆಕ್ಕಿಗರು ಹಾಗೂ ಶ್ರೀ ಕೆ.ಎಸ್. ಶ್ರೀನಿವಾಸಗುಪ್ತ, ಉಪ ತಹಸೀಲ್ದಾರ್ ಇವರ ವಿರುದ್ಧ ಲೋಕಾಯುಕ್ತ ವಿಚಾರಣೆ - ಆರೋಪಗಳಿಂದ ಮುಕ್ತರನ್ನಾಗಿಸುವ ಬಗ್ಗೆ.

**ಓದಲಾಗಿದೆ:** 1) ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ, ಬೆಂಗಳೂರು ಅವರ ಆದೇಶ ಸಂಖ್ಯೆ: ಸಿಸಿಎ:14:99-2000, ದಿನಾಂಕ: 21.1.2000.

2) ಮಾನ್ಯ ಲೋಕಾಯುಕ್ತರು, ಬೆಂಗಳೂರು ಅವರ ಪತ್ರ ಸಂಖ್ಯೆ: ಲೋಕ್:ಎಆರ್‌ಇ-3:ಇಎನ್‌ಕ್ಯೂ 25: 2001-02, ದಿನಾಂಕ: 27.1.2003.

**ಪ್ರಸ್ತಾವನೆ:**

ನೆಲಮಂಗಲ ತಾಲ್ಲೂಕು ಬರಗೂರು ಪಂಚಾಯತಿ ದಾಸೇನಹಳ್ಳಿ ಗ್ರಾಮದ ಸ.ನಂ.105:2 ರಲ್ಲಿನ 0-20 ಗುಂಟೆ ಜಮೀನಿನ ಖಾತೆ ಬದಲಾವಣೆಯನ್ನು ಶ್ರೀಮತಿ ಗಂಗಮ್ಮ ಎಂಬುವರ ಹೆಸರಿನಿಂದ ಶ್ರೀ ರೇವಣ್ಣ ಎಂಬುವರ ಹೆಸರಿಗೆ ಖಾತೆ ಬದಲಾವಣೆ ಮಾಡುವ ಸಲುವಾಗಿ ಶ್ರೀ ವರದರಂಗಯ್ಯ, ಗ್ರಾಮ ಲೆಕ್ಕಾಧಿಕಾರಿ ಬರಗೂರು ಗ್ರಾಮ ಪಂಚಾಯತಿ ಮತ್ತು ಶ್ರೀನಿವಾಸಗುಪ್ತ, ಉಪ ತಹಸೀಲ್ದಾರ್, ನಾಡಕಛೇರಿ, ಸೋಂಪುರ ಹೋಬಳಿ ಇವರ ಅಕ್ರಮ ಸಂಭಾವನೆಯಾಗಿ ರೂ.1500-00 ಗಳನ್ನು ಕೊಡುವಂತೆ ಒತ್ತಾಯಿಸಿರುವುದಾಗಿ ತಿಳಿಸಿದ್ದರ ಮೇರೆಗೆ ದಿನಾಂಕ: 16.7.1997 ರಂದು ಲೋಕಾಯುಕ್ತ ದಳದವರು ಬೀಸಿದ ಬಲೆಗೆ ಸಿಕ್ಕಿಬಿದ್ದ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 14-ಎ ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮಸಂಖ್ಯೆ (1) ರಲ್ಲಿ ವಿಭಾಗಾಧಿಕಾರಿಗಳು, ಬೆಂಗಳೂರು ಅವರ ದಿನಾಂಕ: 21.1.2000ರ ಆದೇಶದಲ್ಲಿ ಗೌ.ಲೋಕಾಯುಕ್ತರಿಗೆ ವಹಿಸಿದ್ದರು.

ಶ್ರೀ ಎಂ.ಪಿ. ವರದರಂಗಯ್ಯ, ಗ್ರಾಮ ಲೆಕ್ಕಿಗರು ಹಾಗೂ ಶ್ರೀ ಕೆ.ಎಸ್. ಶ್ರೀನಿವಾಸಗುಪ್ತ, ಉಪ ತಹಸೀಲ್ದಾರ್ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಿ ಮಾನ್ಯ ಲೋಕಾಯುಕ್ತರು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ಆಪಾದಿತ ನೌಕರರುಗಳ ಮೇಲೆ ಮಾಡಲಾದ ಭ್ರಷ್ಟಾಚಾರದ ಆರೋಪ ಸಾಬೀತಾಗಿಲ್ಲವೆಂದು ಲೋಕಾಯುಕ್ತ ಕಛೇರಿಯ ವಿಚಾರಣಾಧಿಕಾರಿಗಳು ನಿಲುವು ತಾಳಿದ್ದು, ಈ ನಿಲುವನ್ನು ಸಮರ್ಥಿಸುತ್ತಾ, ಸದರಿಯವರ ಮೇಲೆ ಮಾಡಲಾದ ಆರೋಪ ಸ್ಥಿರಪಡದೇ ಇರುವುದರಿಂದ, ಅವರನ್ನು ದೋಷಮುಕ್ತರನ್ನಾಗಿ ಮಾಡಲು ಗೌ. ಲೋಕಾಯುಕ್ತ ರವರು ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಸರ್ಕಾರವು ಶ್ರೀ ಎಂ.ಪಿ. ವರದರಂಗಯ್ಯ, ಗ್ರಾಮ ಲೆಕ್ಕಿಗರು, ಬರಗೂರು ಗ್ರಾಮ ಪಂಚಾಯ್ತಿ ಮತ್ತು ಶ್ರೀನಿವಾಸಗುಪ್ತ, ಉಪ ತಹಸೀಲ್ದಾರ್, ನಾಡಕಛೇರಿ, ಸೋಂಪುರ ಹೋಬಳಿ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಕೈಬಿಡಲು ನಿರ್ಧರಿಸಿ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 512 ಬಿಎಂಎಂ 2003, ಬೆಂಗಳೂರು, ದಿನಾಂಕ: 24ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ಎಂ.ಪಿ. ವರದರಂಗಯ್ಯ ಗ್ರಾಮ ಲೆಕ್ಕಿಗರು, ಬರಗೂರು ಗ್ರಾಮ ಪಂಚಾಯ್ತಿ ಮತ್ತು ಶ್ರೀನಿವಾಸ ಗುಪ್ತ, ಉಪ ತಹಶೀಲ್ದಾರ್, ನಾಡಕಛೇರಿ, ಸೋಂಪುರ ಹೋಬಳಿ ಇವರ ವಿರುದ್ಧ ಮಾಡಲಾದ ಭ್ರಷ್ಟಾಚಾರದ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿಲ್ಲದ ಕಾರಣ ಇವರುಗಳನ್ನು ಆರೋಪದಿಂದ ಮುಕ್ತರನ್ನಾಗಿಸಿ ಇವರ ವಿರುದ್ಧ ಮಾಡಲಾದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 100 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಬಿ. ನಿಂಗೇಗೌಡ, ನಿವೃತ್ತ ಕೆಎಎಸ್ ಅಧಿಕಾರಿ, ಅವರ ಅಮಾನತ್ತಿನ ಅವಧಿಯನ್ನು ಇತ್ಯರ್ಥ ಪಡಿಸುವ ಬಗ್ಗೆ.

**ಓದಲಾಗಿದೆ:**
1) ಆದೇಶ ಸಂಖ್ಯೆ: ಸಿಆಸುಇ 141 ಎಸ್‌ಇಎನ್ 91, ದಿನಾಂಕ: 23.04.1992.
2) ಆದೇಶ ಸಂಖ್ಯೆ: ಸಿಆಸುಇ 141 ಎಸ್‌ಇಎನ್ 91, ದಿನಾಂಕ: 08.01.1993.
3) ಆದೇಶ ಸಂಖ್ಯೆ: ಸಿಆಸುಇ 141 ಎಸ್‌ಇಎನ್ 91, ದಿನಾಂಕ: 03.11.2003.
4) ನೋಟೀಸ್ ಸಂಖ್ಯೆ: ಸಿಆಸುಇ 141 ಎಸ್‌ಇಎನ್ 91, ದಿನಾಂಕ: 18.11.2003.
5) ಬಿ. ನಿಂಗೇಗೌಡ ನಿವೃತ್ತ ಕೆಎಎಸ್ ಅಧಿಕಾರಿ, ಅವರ ಉತ್ತರ ದಿನಾಂಕ: 01.12.2003.

**ಪ್ರಸ್ತಾವನೆ:**

ಮಂಡ್ಯ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ನಾಗಮಂಗಲ ಮತ್ತು ಮಳವಳ್ಳಿ ತಾಲ್ಲೂಕುಗಳ ಗ್ರಾಮಗಳಲ್ಲಿನ ದೇವಸ್ಥಾನಗಳಿಗೆ ತಸ್ಥೀಕ್ ಮೊತ್ತವನ್ನು ನಿಗದಿಪಡಿಸುವಲ್ಲಿ ಅಕ್ರಮವೆಸಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟುಮಾಡಿದ ಆರೋಪಕ್ಕಾಗಿ ಶ್ರೀ ಬಿ. ನಿಂಗೇಗೌಡ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆದು ಮೇಲೆ (3) ರಲ್ಲಿ ಓದಲಾದ ದಿನಾಂಕ: 03.11.2003ರ ಸರ್ಕಾರಿ ಆದೇಶದಲ್ಲಿ ಅವರ ನಿವೃತ್ತಿ ಸೌಲಭ್ಯಗಳಿಂದ ಸರ್ಕಾರಕ್ಕೆ ನಷ್ಟವಾದ 2,31,420-00 ರೂ.ಗಳನ್ನು ವಸೂಲು ಮಾಡುವ ಹಾಗೂ ಮಾಸಿಕ ವಿಶ್ರಾಂತಿ ವೇತನದಿಂದ 500-00 ರೂ.ಗಳನ್ನು ನಿರಂತರವಾಗಿ ಕಡಿತಗೊಳಿಸುವ ದಂಡನೆ ವಿಧಿಸಲಾಯಿತು. ಈ ವಿಚಾರಣೆಯನ್ನು ಕಾದಿಟ್ಟು ಶ್ರೀ ಬಿ. ನಿಂಗೇಗೌಡ, ಕೆಎಎಸ್ ಅಧಿಕಾರಿ, ಅವರನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ: 23.04.1992ರ ಸರ್ಕಾರಿ ಆದೇಶದಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಡಲಾಯಿತು ಹಾಗೂ ಮೇಲೆ (2) ರಲ್ಲಿ ಓದಲಾದ ದಿನಾಂಕ: 08.01.1993ರ ಸರ್ಕಾರಿ ಆದೇಶದಲ್ಲಿ ಮತ್ತೆ ಸೇವೆಗೆ ತೆಗೆದುಕೊಳ್ಳಲಾಯಿತು. ಸದರೀ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಮೇಲೆ ಕಳೆಯದ ಅವಧಿ ಎಂದು ಏಕೆ ಪರಿಗಣಿಸಬಾರದೆಂಬುದಕ್ಕೆ ಸಮಜಾಯಿಷಿ ಕೇಳಿ ಅವರಿಗೆ ಮೇಲೆ (4) ರಲ್ಲಿ ಓದಲಾದ ದಿನಾಂಕ: 18.11.2003ರ ನೋಟೀಸ್ ನೀಡಲಾಯಿತು. ಈ ನೋಟೀಸ್‌ಗೆ ಬಿ. ನಿಂಗೇಗೌಡ ಅವರು ಮೇಲೆ (5) ರಲ್ಲಿ ಓದಲಾದ ದಿನಾಂಕ: 01.12.2003ರ ಉತ್ತರ ಸಲ್ಲಿಸಿ, ತಿರುಳಿಲ್ಲದ ಆರೋಪಗಳನ್ನು ಹೊರಿಸಿ ವಿಚಾರಣೆ ನಡೆಸಲಾಗಿದ್ದು ತಹಸೀಲ್ದಾರ್ ಹಾಗೂ ಜಿಲ್ಲಾಧಿಕಾರಿಗಳು ನಡೆಸಿದ ಅಕ್ರಮಗಳಿಗೆ ತಮ್ಮನ್ನು ಹೊಣೆ ಮಾಡಲಾಗಿದ್ದು ವಿಚಾರಣೆಯೇ ಅಕ್ರಮವಾಗಿರುವಾಗ ಅಮಾನತ್ತಿನ ಅವಧಿಯನ್ನು ಹಾಗೆಂದೇ ಪರಿಗಣಿಸಲಾಗದೆಂದು ತಿಳಿಸಿ ಅದನ್ನು ಕರ್ತವ್ಯದ ಮೇಲಿನ ಅವಧಿ ಎಂದು ಪರಿಗಣಿಸಲು ಕೋರಿದ್ದಾರೆ. ಆದರೆ ವಿಚಾರಣೆಯು ದಾಖಲೆಗಳನ್ನಾಧರಿಸಿ ಕ್ರಮಬದ್ಧವಾಗಿ ನಡೆದಿದ್ದು ದಂಡನೆ ವಿಧಿಸಲಾಗಿದೆ. ಆದ್ದರಿಂದ ಶ್ರೀ ಬಿ. ನಿಂಗೇಗೌಡ, ನಿವೃತ್ತ ಕೆಎಎಸ್ ಅಧಿಕಾರಿ ಅವರ ಹೇಳಿಕೆಯಲ್ಲಿ ಯಾವುದೇ ಪರಿಶೀಲನಾರ್ಹ ಅಂಶಗಳು ಇಲ್ಲ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 141 ಎಸ್‌ಇಎನ್ 91, ಬೆಂಗಳೂರು, ದಿನಾಂಕ: 22ನೇ ಜನವರಿ 2004**

ಕರ್ನಾಟಕ ನಾಗರೀಕ ಸೇವಾ ನಿಯಮದ 100(5)ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ. ನಿಂಗೇಗೌಡ, ನಿವೃತ್ತ ಕೆಎಎಸ್ ಅಧಿಕಾರಿ ಅವರು ತಮ್ಮ ವಿರುದ್ಧ ನಡೆದ ಇಲಾಖಾ ವಿಚಾರಣೆ ಸಂಬಂಧ ದಿನಾಂಕ: 23.04.1992 ರಿಂದ 08.01.1993ರ ಸರ್ಕಾರಿ ಆದೇಶಗಳ ನಡುವೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯದ ಮೇಲೆ ಕಳೆಯದ ಅವಧಿ ಎಂದು ಪರಿಗಣಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 101

**ವಿಷಯ:** ಶ್ರೀ ವಿ.ಎಲ್. ದೇಶಪಾಂಡೆ, ಕೆಎಎಸ್ ಅಧಿಕಾರಿ, ಹಾಗೂ ಶ್ರೀ ಸುರೇಶ್ ಜಾಧವ, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ -ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಸಂಖ್ಯೆ: ಸಿಆಸುಇ 125 ಎಸ್‌ಇಎನ್ 01, ದಿನಾಂಕ: 27.03.2003.
2) ಶ್ರೀ ಡಿ. ಸುರೇಶ್ ಜಾಧವ್ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಅವರ ಉತ್ತರ ದಿ: 10.04.03.

**ಪ್ರಸ್ತಾವನೆ:**

ಬೀದರ್ ಜಿಲ್ಲೆ ಹುಮ್ನಾಬಾದ್ ಕ್ಷೇತ್ರಾಭಿವೃದ್ಧಿ ಅಧಿಕಾರಿ ಹುದ್ದೆಯಲ್ಲಿ ಶ್ರೀ ವಿ.ಎಲ್. ದೇಶಪಾಂಡೆ, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು ಹಾಗೂ ಹುಮ್ನಾಬಾದ್ ತಾಲ್ಲೂಕು ಪಂಚಾಯತ್ ಕಛೇರಿಯ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ಹಿತರಕ್ಷಣ ಸಂಸ್ಥೆಯಲ್ಲಿ ವಿಸ್ತರಣಾಧಿಕಾರಿ ಹುದ್ದೆಯಲ್ಲಿ ಶ್ರೀ ಡಿ. ಸುರೇಶ್ ಜಾಧವ್ ಅವರು ಕಾರ್ಯನಿರ್ವಹಿಸುತ್ತಿದ್ದಾಗ ಎನ್‌ಆರ್‌ಇಪಿ ಯೋಜನೆಯಲ್ಲಿ ನಿರ್ಮಿಸಲಾದ ಬಸ್‌ಸ್ಟ್ಯಾಂಡ್, ಹರಿಜನರ ಸಾಮೂಹಿಕ ಭವನ, ಬಾಲಭವನ ಗೋಬರ್ ಗ್ಯಾಸ್, ಕಿರು ನೀರು ಸರಬರಾಜು ಯೋಜನೆ ಮುಂತಾದ ಕಾಮಗಾರಿಗಳಲ್ಲಿ ಅಕ್ರಮ ಎಸಗಿರುವ ಆರೋಪಗಳಿಗಾಗಿ ಶ್ರೀ ವಿ.ಎಲ್. ದೇಶಪಾಂಡೆ ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಹಾಗೂ ಶ್ರೀ ಡಿ. ಸುರೇಶ್ ಜಾಧವ್ ಅವರುಗಳಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 12 ರನ್ವಯ ಮೇಲೆ (1) ರಲ್ಲಿ ಓದಲಾದ ದಿನಾಂಕ: 27.03.2003ರ ನೋಟೀಸ್ ನೀಡಿ ಅವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸ್‌ಗೆ ಶ್ರೀ ವಿ.ಎಲ್. ದೇಶಪಾಂಡೆ, ಕೆಎಎಸ್ ಅಧಿಕಾರಿಯವರು ಉತ್ತರ ಸಲ್ಲಿಸಿರುವುದಿಲ್ಲ. ಮತ್ತೊಬ್ಬ ಆರೋಪಿತ ಅಧಿಕಾರಿಯಾದ ಶ್ರೀ ಡಿ. ಸುರೇಶ್ ಜಾಧವ್ ಅವರು ಮೇಲೆ (3)

ರಲ್ಲಿ ಓದಲಾದ ದಿನಾಂಕ: 10.04.2003ರ ಉತ್ತರ ಸಲ್ಲಿಸಿ, ತಮ್ಮ ವಿರುದ್ಧ ಹೊರಿಸಲಾಗಿರುವ ಆರೋಪಗಳ ಪೈಕಿ ಕೆ.ಎಸ್.ಎಸ್.ಐ.ಡಿ.ಸಿ. ಯಿಂದ ಪಡೆದ ರೂ.71,040ಕ್ಕೆ ಲೆಕ್ಕ ಇಟ್ಟಿಲ್ಲದಿರುವುದು ಮಾತ್ರ ತಮಗೆ ಸಂಬಂಧಿಸಿದ್ದು ವಿಶೇಷ ಘಟಕ ಯೋಜನೆಯಡಿಯಲ್ಲಿ ಭದ್ರಾಪೂರ ಕೃಷಿ ಕಾಲೋನಿ ಅಭಿವೃದ್ಧಿಗಾಗಿ ಬಿಡುಗಡೆ ಮಾಡಿರುವ ಅನುದಾನದಲ್ಲಿ 80 ಪ್ರಯೋಜನದಾರರಿಗೆ ರೂ.1,000-00 ದಂತೆ ಮನೆ ದುರಸ್ತಿಗಾಗಿ ಅನುದಾನ ಬಿಡುಗಡೆ ಮಾಡಲಾಗಿತ್ತು. ಜಿಲ್ಲಾಧಿಕಾರಿಗಳ ಆದೇಶದ ಪ್ರಕಾರ ಕೆ.ಎಸ್.ಎಸ್.ಐ.ಡಿ.ಸಿ. ಯಿಂದ ಜಿಂಕಶೀಟ್ (ಪತ್ರಗಳು) ಖರೀದಿಸಲು ಡಿ.ಡಿ. ಕಳುಹಿಸಿ ಕೊಡಲಾಯಿತು. ಅವರಲ್ಲಿ ದಾಸ್ತಾನು ಇಲ್ಲದಿರುವುದರಿಂದ ವಾಪಸು ಕಳುಹಿಸಿರುತ್ತಾರೆ. ನಂತರ ರೂ.71,040 ಗಳನ್ನು ಭದ್ರಾಪೂರ ಗ್ರಾಮಕ್ಕೆ ಸಂಬಂಧಿಸಿದ ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್, ನಿರ್ಣಾ ಶಾಖೆಯಲ್ಲಿ ಜಮಾ ಮಾಡಲಾಯಿತು. 80 ಪ್ರಯೋಜನದಾರರಿಗೆ ಸಹಾಯಧನ ಮನೆ ದುರಸ್ತಿಯ ನಂತರ ಬ್ಯಾಂಕಿನ ಖಾತೆಯಿಂದ ನೇರವಾಗಿ ಫಲಾನುಭವಿಗಳ ಖಾತೆಯ ಮುಖಾಂತರ ಪಾವತಿ ಮಾಡಲಾಗಿರುವುದರಿಂದ ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆಯಡಿಯಲ್ಲಿ ಕೈಗೊಂಡ ಕಾಮಗಾರಿಗಳಲ್ಲಿ ಅಕ್ರಮವೆಸಗಿ ಸರ್ಕಾರಕ್ಕೆ ನಷ್ಟವುಂಟು ಮಾಡಿದ ಆರೋಪಕ್ಕಾಗಿ ಇತರರೊಡನೆ ಶ್ರೀ ವಿ.ಎಲ್. ದೇಶಪಾಂಡೆ ಹಾಗೂ ಶ್ರೀ ಸುರೇಶ್ ಡಿ. ಜಾಧವ್ ಅವರ ವಿರುದ್ಧವೂ ಸಹ ಇಲಾಖಾ ವಿಚಾರಣೆ ನಡೆದು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 13 ಇಎನ್‌ಕ್ಯೂ 87, ದಿನಾಂಕ: 18.02.1989ರ ಸರ್ಕಾರಿ ಆದೇಶದಲ್ಲಿ ವಿಧಿಸಲಾಗಿದ್ದ ದಂಡನೆಯನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅವರಿಬ್ಬರೂ ಪ್ರಶ್ನಿಸಿದ್ದರೂ ಪರಿಗಣಿಸಿದ ಮಂಡಳಿಯು ತನಿಖೆ ಸಮಯದಲ್ಲಿ ದೂರಿನ ಪ್ರತಿಯನ್ನು ನೀಡಿಲ್ಲವೆಂಬ ಆಧಾರದ ಮೇಲೆ ದಂಡನೆಯನ್ನು ರದ್ದು ಪಡಿಸಿತು. ಹಾಗೂ ದೂರಿನ ಪ್ರತಿ ನೀಡುವ ಮೂಲಕ ಮತ್ತೆ ತನಿಖೆ ನಡೆಸಬಹುದೆಂದು ತಿಳಿಸಿದ್ದರ ಮೇರೆಗೆ ಸನ್ಮಾನ್ಯ ಉಪ ಲೋಕಾಯುಕ್ತರು ನೀಡಿದ ವರದಿಯನ್ವಯ ನೀಡಲಾದ ನೋಟೀಸ್‌ಗೆ ಶ್ರೀ ವಿ.ಎಲ್. ದೇಶಪಾಂಡೆ, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು ಉತ್ತರ ಸಲ್ಲಿಸದೇ ಇರುವುದರಿಂದ ಪರೋಕ್ಷವಾಗಿ ಆರೋಪಗಳನ್ನು ಅವರು ಒಪ್ಪಿಕೊಂಡಂತಾಗಿದೆ ಹಾಗೂ ಶ್ರೀ ಸುರೇಶ್ ಡಿ. ಜಾಧವ ಅವರು ಸಲ್ಲಿಸಿರುವ ಉತ್ತರದಲ್ಲಿ ಯಾವ ಹೊಸ ಅಂಶಗಳು ಇರುವುದಿಲ್ಲ ಹಾಗೂ ಅವರ ಕೋರಿಕೆಗೆ ಯಾವುದೇ ಸಮರ್ಥನೆಯನ್ನು ನೀಡಿರುವುದಿಲ್ಲ. ಸನ್ಮಾನ್ಯ ಉಪ ಲೋಕಾಯುಕ್ತರ ವರದಿಯಲ್ಲಿ ತಿಳಿಸಿರುವಂತೆ ಅವುಗಳು ಸಾಬೀತಾದ ಆರೋಪಗಳಾಗಿಯೇ ಉಳಿದಿವೆ. ಆದ್ದರಿಂದ ಶ್ರೀ ವಿ.ಎಲ್. ದೇಶಪಾಂಡೆ, ಕೆಎಎಸ್ ಅಧಿಕಾರಿ ಹಾಗೂ ಶ್ರೀ ಸುರೇಶ್ ಡಿ. ಜಾಧವ್ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ ಅವರುಗಳ ವಿರುದ್ಧ ನೀಡಲಾದ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡ ಸರ್ಕಾರವು ದಂಡನೆ ವಿಧಿಸಲು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 125 ಎಸ್‌ಇಎನ್ 2001, ಬೆಂಗಳೂರು, ದಿನಾಂಕ: 23ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಪ್ರಕರಣದ ಆರೋಪಗಳಿಗೆ ಈ ಕೆಳಕಂಡ ದಂಡನೆಯನ್ನು ವಿಧಿಸುತ್ತದೆ.

ಅ) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii) ಮತ್ತು 8(iv) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ವಿ.ಎಲ್. ದೇಶಪಾಂಡೆ, ಕೆಎಎಸ್ (ಹಿರಿಯ ಶ್ರೇಣಿ) ಅವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cummulative effect) ತಡೆ ಹಿಡಿಯಬೇಕೆಂದು ಹಾಗೂ ಅವರ ದುರ್ನಡತೆಯಿಂದ ಸರ್ಕಾರಕ್ಕೆ ಉಂಟಾದ ನಷ್ಟ ರೂ.6070-35 ಗಳನ್ನು 10 ಕಂತುಗಳಲ್ಲಿ ವಸೂಲು ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಆ) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸುರೇಶ್ ಡಿ. ಜಾಧವ್, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ ಅವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cummulative effect) ತಡೆ ಹಿಡಿಯಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 102

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ವಿಷಯ:** ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಅಧ್ಯಕ್ಷರಿಗೆ ವೇತನ ಭತ್ಯೆ ಮತ್ತು ಇತರೆ ಸೌಲಭ್ಯಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ದಿನಾಂಕ: 17.11.2003ರ ಅಧಿಸೂಚನೆ ಸಂಖ್ಯೆ: ಸಿಆಸುಇ 60 ಭಾಮಮ 2003.
2) ದಿನಾಂಕ: 22.11.2003ರ ಬೆಂಗಳೂರಿನ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಕಾರ್ಯದರ್ಶಿ ಯವರ ಪತ್ರದ ಸಂಖ್ಯೆ: ಎಸ್‌ಎಂಸಿ:36:ಇಎಸ್‌ಟಿ:2003.
3) ದಿನಾಂಕ: 22.11.2003ರ ಅಧಿಸೂಚನೆಯ ಸಂಖ್ಯೆ: ಸಿಆಸುಇ 148 ಶಿಸನೇ 2003.

**ಪ್ರಸ್ತಾವನೆ:**

ಉಲ್ಲೇಖ (1) ರಲ್ಲಿ ಓದಲಾದ ದಿನಾಂಕ: 17.11.2003ರ ಅಧಿಸೂಚನೆಯಲ್ಲಿ ಮಂಗಳೂರಿನ, ಶ್ರೀ ಕೆ.ಎಸ್. ಮೊಹಮ್ಮದ್ ಮಸೂದ್ ರವರನ್ನು ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಅಧ್ಯಕ್ಷರನ್ನಾಗಿ ನಾಮ ನಿರ್ದೇಶನ ಮಾಡಲಾಯಿತು.

ಉಲ್ಲೇಖ (2) ರಲ್ಲಿ ಓದಲಾದ ದಿನಾಂಕ: 22.11.2003ರ ತಮ್ಮ ಪತ್ರದಲ್ಲಿ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಕಾರ್ಯದರ್ಶಿಯವರು ಆಯೋಗದ ಅಧ್ಯಕ್ಷರಾದ ಶ್ರೀ ಕೆ.ಎಸ್. ಮೊಹಮ್ಮದ್ ಮಸೂದ್ ರವರಿಗೆ ಸಂಪುಟ ದರ್ಜೆಯ ಸಚಿವರ ಸ್ಥಾನಮಾನಗಳನ್ನು ನೀಡಲು ಹಾಗೂ ಆಯೋಗದ ಅಧ್ಯಕ್ಷರ ಆಪ್ತ ಸಿಬ್ಬಂದಿ ಹುದ್ದೆಗಳನ್ನು ಉಪಯೋಗಿಸಿಕೊಳ್ಳಲು ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿದ್ದರು.

ಉಲ್ಲೇಖ (3) ರಲ್ಲಿ ಓದಲಾದ ದಿನಾಂಕ: 22.11.2003ರ ಅಧಿಸೂಚನೆಯಲ್ಲಿ ಶ್ರೀ ಕೆ.ಎಸ್. ಮೊಹಮ್ಮದ್ ಮಸೂದ್ ರವರು ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಅಧ್ಯಕ್ಷರಾಗಿ ಕಾರ್ಯಭಾರವನ್ನು ವಹಿಸಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಅವರಿಗೆ ಸಂಪುಟದ ದರ್ಜೆ ಸಚಿವರ (Cabinet Rank) ಸ್ಥಾನಮಾನಗಳನ್ನು ನೀಡಲಾಗಿದೆ. ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಅಧ್ಯಕ್ಷರಿಗೆ ವೇತನ, ಭತ್ಯೆ ಮತ್ತು ಇತರೆ ಸೌಲಭ್ಯಗಳನ್ನು ಮಂಜೂರು ಮಾಡುವ ವಿಷಯಗಳನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 60 ಭಾಮಮ 2003, ಬೆಂಗಳೂರು, ದಿನಾಂಕ: 27ನೇ ಜನವರಿ 2004**

2000ದ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ನಿಯಮಾವಳಿಗಳ ನಿಯಮ-3 ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಎಸ್. ಮೊಹಮ್ಮದ್ ಮಸೂದ್ ರವರು ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಅಧ್ಯಕ್ಷರಾಗಿ ಅಧಿಕಾರದಲ್ಲಿರುವ ತನಕ ಅಥವಾ ಮುಂದಿನ ಆದೇಶದವರೆಗೆ ಈ ಎರಡರಲ್ಲಿ ಯಾವುದು ಮೊದಲು ಸಂಭವಿಸುವುದೋ ಅಲ್ಲಿಯವರೆಗೆ ಗನ್‌ಮ್ಯಾನ್ ಹಾಗೂ ಕಾರಿನ ಮೇಲಿರುವ ಕೆಂಪು ದೀಪವನ್ನು ಹೊರತುಪಡಿಸಿ ದಿನಾಂಕ: 17.06.2002ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 41 ಜಿಎಂ 2002 ರಡಿ ನಿಗದಿಪಡಿಸಿರುವಂತೆ ವೇತನ, ಭತ್ಯೆ, ಮತ್ತಿತರೆ ಎಲ್ಲಾ ಸೌಲಭ್ಯಗಳನ್ನು ದಿನಾಂಕ: 19.11.2003 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಕೃಷ್ಣಮೂರ್ತಿ**

ಪಿ.ಆರ್. 103

ಸರ್ಕಾರದ ಉಪ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ).

## INFRASTRUCTURE DEVELOPMENT SECRETARIAT

**Subject:** Gadag Sholapur Gauge Conversion Project-Release of Funds-orders.

**Read:** 1) G.O.No.IDD 40 NSW 2003, dated: 16.09.2003.

2) Letter No.W63/B/CN/BNC/Genl, dated: 6.11.2003 from the Chief Administrative Officer (Construction), South Western Railway, Bangalore.

**PREAMBLE:**

In the Government Order read at (1) above, the Government of Karnataka had released Rs.1 crore being the State Government's share of 50% of the anticipated expenditure on the Gadag-Sholapur Gauge Conversion Project, for the year 2003-2004.

In the letter read at (2) above, the Chief Administrative Officer (Construction), South Western Railway, Bangalore has requested the State Government to release additional funds for ensuring accelerated progress of the work on the Sholapur-Gadag Conversion Project.

After considering the proposal, the Government of Karnataka have decided to release Rs.2 crores for this in addition to the amount already released. Hence this order.

**GOVERNMENT ORDER NO. IDD 95 NSW 2003, BANGALORE, DATED: 22nd January 2004.**

In the circumstances explained in the Preamble, Government is pleased to release Rs.2.00 crores (Rupees two crore only) being the State Governments share of 50% of the Sholapur Gadag Gauge Conversion Project.

2. The expenditure shall be met out of the Head of account "5465-01-190-3-03-211-Sholapur Gadag gauge conversion project-investments (Plan)."

3. The Managing Director, iDeck is authorized to draw the amount through a payee's receipt duly countersigned by the Under Secretary to Government, Infrastructure Development Department and iDeck shall in turn Deposit the same with the Financial Adviser and Chief Accounts Officer, (Construction), South Western Railway, Bangalore.

4. The Chief Engineer, (Construction), South Western Railway shall arrange to furnish monthly expenditure statement to the Infrastructure Development Department by the 5th of the succeeding month.

5. This order issues with the concurrence of Finance Department vide its U.O.Note No.FD 2240/Exp.1/2003, dated: 08.01.2004.

By Order and in the Name of the Governor of Karnataka,

**T.B. RENUKAPRASAD**

PR-104

Under Secretary to Government,

Infrastructure Development Department.

**ಆರ್ಥಿಕ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ: ಆಇ 1889 ವೆಚ್ಚ-6 2003, ಬೆಂಗಳೂರು, ದಿನಾಂಕ: 9ನೇ ಜನವರಿ 2004**

ಸರ್ಕಾರದ ಆದೇಶ ಸಂಖ್ಯೆ: ಆಇ 1889 ವೆಚ್ಚ-6 2003 ದಿನಾಂಕ: 9.9.2003ರ ಆದೇಶದಲ್ಲಿರುವ ಲೆಕ್ಕ ಶೀರ್ಷಿಕೆ 2215-01-196-2-01 (ಯೋಜನೇತರ) ಎನ್ನುವುದಕ್ಕೆ ಬದಲಾಗಿ 2215-01-197-2-01-300 (ಯೋಜನೇತರ) ಎಂದು ತಿದ್ದಿಕೊಂಡು ಓದುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಬಸವರಾಜ್**

ಪಿ.ಆರ್. 105 ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಜಿ.ಪಂ.).

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯದಲ್ಲಿನ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ ಜಾತಿ ಪಟ್ಟಿಯಲ್ಲಿನ ಜಾತಿ/ ಉಪಜಾತಿಗಳಿಗೆ ಒಳ ಮೀಸಲಾತಿ ಕಲ್ಪಿಸುವ ಕುರಿತು ಏಕಸದಸ್ಯ ಆಯೋಗ ರಚನೆಗೆ ಸಂಬಂಧಿಸಿದಂತೆ ಪೂರಕ ಸಿಬ್ಬಂದಿಗಳಿಗೆ ಹುದ್ದೆಗಳ ಸೃಜನೆ ಕುರಿತು ಆದೇಶ.

**ಓದಲಾಗಿದೆ:** 1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 227 ಎಸ್‌ಎಡಿ 2003, ದಿನಾಂಕ: 07.01.2004ರ

2) ಸಕನಿ/ಹಿಂವ ಮತ್ತು ನಿ/ಸಿಆರ್1/2003-04, ದಿನಾಂಕ: 17.12.2003ರ ಪತ್ರವು ಸಮಾಜ ಕಲ್ಯಾಣ ಇಲಾಖಾ ಆಯುಕ್ತರಿಂದ ಬಂದಿದೆ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರಲ್ಲಿನ ದಿನಾಂಕ: 07.01.2004ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯದಲ್ಲಿನ ಅನುಸೂಚಿತ ಜಾತಿಗಳು ಅನುಸೂಚಿತ ಬುಡಕಟ್ಟುಗಳ ಜಾತಿ ಪಟ್ಟಿಯಲ್ಲಿನ ಜಾತಿಗಳು/ಉಪಜಾತಿಗಳಿಗೆ ಸಂಬಂಧಿಸಿದಂತೆ ಒಳಮೀಸಲಾತಿ ಕಲ್ಪಿಸುವ ಕುರಿತು ಒರಿಸ್ಸಾ ರಾಜ್ಯದ ಶ್ರೇಷ್ಠ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಶ್ರೀ ಎನ್.ವೈ. ಹನುಮಂತಪ್ಪ ರವರನ್ನು ಏಕಸದಸ್ಯ ಆಯೋಗಕ್ಕೆ ನೇಮಿಸಿದೆ.

ಮೇಲೆ ಓದಲಾದ ಕ್ರಮಸಂಖ್ಯೆ: (2)ರ ದಿನಾಂಕ: 17.12.2003ರ ಸರ್ಕಾರಿ ಪತ್ರದಲ್ಲಿ ಸಮಾಜ ಕಲ್ಯಾಣ ಇಲಾಖಾ ಆಯುಕ್ತರು ಸದರಿ ಆಯೋಗಕ್ಕೆ ಸಂಬಂಧಿಸಿದಂತೆ ರಚಿತವಾದ ಆಯೋಗದ ಕಾರ್ಯನಿರ್ವಹಣೆಗಾಗಿ ಪೂರಕ ಅಧಿಕಾರಿ ಸಿಬ್ಬಂದಿ ಸೃಜನೆ ಕುರಿತು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುವರು. ಹಾಗೂ ಇದರ ಜೊತೆಗೆ ಆವರ್ತಕ ಅನಾವರ್ತಕ ವೆಚ್ಚ ರೂ.38,18,816 ಗಳನ್ನು ಅನುದಾನ ಬಿಡುಗಡೆ ಮಾಡುವಂತೆ ಪ್ರಸ್ತಾಪಿಸಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವರು. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 221 ಎಸ್‌ಎಡಿ 2003, ಬೆಂಗಳೂರು, ದಿನಾಂಕ: 27ನೇ ಜನವರಿ 2004**

ಪ್ರಸ್ತಾವನೆಯಲ್ಲಿ ತಿಳಿಯಪಡಿಸಲಾದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 227 ಎಸ್‌ಎಡಿ 2003, ದಿನಾಂಕ: 07.01.2004 ರಲ್ಲಿ ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ ಜಾತಿಯ ಪಟ್ಟಿಗಳಲ್ಲಿನ ಜಾತಿ / ಉಪಜಾತಿಗಳಿಗೆ ಸಂಬಂಧಿಸಿದಂತೆ ಒಳಮೀಸಲಾತಿ ಕಲ್ಪಿಸುವ ಕುರಿತು ಒರಿಸ್ಸಾ ರಾಜ್ಯದ ಶ್ರೇಷ್ಠ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿಗಳಾದ ಶ್ರೀ ಎನ್.ವೈ. ಹನುಮಂತಪ್ಪ ಇವರ ಆಯೋಗಕ್ಕೆ ಸಂಬಂಧಿಸಿದಂತೆ ಆಯೋಗದ ಕಾರ್ಯನಿರ್ವಹಣೆಗೆ ಈ ಕೆಳಕಂಡ ಅಧಿಕಾರಿ/ಸಿಬ್ಬಂದಿ ವರ್ಗದವರನ್ನು ಮೂರು ತಿಂಗಳ ಅವಧಿಯವರೆಗೆ ಮಾತ್ರ ಸೃಜಿಸಿ, ಆದೇಶಿಸಿದೆ. ಆಯೋಗದ ಕಾರ್ಯದರ್ಶಿ ಹುದ್ದೆಗೆ ಸಮಾಜ ಕಲ್ಯಾಣ ಇಲಾಖೆಯಿಂದ ಒಬ್ಬ ಜಂಟಿ ನಿರ್ದೇಶಕರನ್ನು ಆಯೋಗದ ಕಾರ್ಯದರ್ಶಿ ಮತ್ತು ಪದನಿಮಿತ್ತ ಜಂಟಿ ನಿರ್ದೇಶಕರು ಎಂಬುದಾಗಿ ಪದನಾಮ ಮಾಡಿ ನೇಮಿಸಲು ಆದೇಶಿಸಿದೆ.

| ಕ್ರ.ಸಂ. | ಸೃಜಿಸಲಾದ ಹುದ್ದೆ / ಪದನಾಮ | ಸೃಜಿಸಲಾದ ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ | ಒಂದು |
| 2 | ಕ್ಲರ್ಕ್ ಕಮ್ ಟೈಪಿಸ್ಟ್ ಕಮ್ ಸ್ಟೆನೋ | ಒಂದು |
| 3 | ಮೊದಲನೇ ದರ್ಜೆ ಸಹಾಯಕ | ಒಂದು |
| 4 | ಕಛೇರಿ ಅಧೀಕ್ಷಕ | ಒಂದು |

ಮೇಲಿನ ಎಲ್ಲಾ ಹುದ್ದೆಗಳನ್ನು ಸಮಾಜ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿ ವರ್ಗದವರನ್ನು ನಿಯೋಜನೆ ಮೇರೆಗೆ ಹಾಗೂ ಸಮಾಜ ಕಲ್ಯಾಣ ಇಲಾಖೆಯಲ್ಲಿಯೇ ವೇತನ ಪಡೆಯುವ ಷರತ್ತಿನ ಮೇರೆಗೆ ಭರ್ತಿ ಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: FD 21 Expen 04, ದಿನಾಂಕ: 24.01.2004 ರಲ್ಲಿ ನೀಡಲಾದ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮರುಳಸಿದ್ದಯ್ಯ**

ಪಿ.ಆರ್. 106 ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 10ನೇ ಪಂಚವಾರ್ಷಿಕ ಯೋಜನಾ ಅವಧಿಯ ಸರ್ವ ಕುಟುಂಬ ಸಮೀಕ್ಷೆಯ ಅನುಸೂಚಿಯನ್ನು ಮೆ: ಎಂಸಿ ಮತ್ತು ಎಎಲ್, ಮೆಹ್ರಾ ಕಾಂಪ್ಲೆಕ್ಸ್ ನಂ.42, ಮಿಲ್ಲರ್ಸ್ ರಸ್ತೆ, ಬೆಂಗಳೂರು-560052 ಇವರು ಮುದ್ರಿಸಿ ಜಿಲ್ಲಾ ಪಂಚಾಯತ್‌ಗಳಿಗೆ ಸರಬರಾಜು ಮಾಡುವ ಬಗ್ಗೆ.

**ಉಲ್ಲೇಖ:**
1) ಭಾರತ ಸರ್ಕಾರದ ಪತ್ರ ಸಂಖ್ಯೆ: ಕ್ಯೂ-16025/4/2002-ಎಐ (ಆರ್‌ಡಿ), ದಿನಾಂಕ: 13.09.2002 ಮತ್ತು 10.12.2002.
2) ಭಾರತ ಸರ್ಕಾರದ ಪತ್ರ ಸಂಖ್ಯೆ: ಕ್ಯೂ-16025/4/2002-ಎಐ (ಆರ್‌ಡಿ), ದಿನಾಂಕ: 21.01.2003 ಮತ್ತು 28.03.2003.
3) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿಪಿ 92 ಎಸ್‌ಜೆವೈ 2002, ಬೆಂಗಳೂರು, ದಿನಾಂಕ: 19.06.2003.
4) ಮೆ: ಎಂಸಿ ಮತ್ತು ಎಎಲ್, ಮೆಹ್ರಾ ಕಾಂಪ್ಲೆಕ್ಸ್ ನಂ.42, ಮಿಲ್ಲರ್ಸ್ ರಸ್ತೆ, ಬೆಂಗಳೂರು-560052 ಇವರ ದಿನಾಂಕ: 20.12.2003ರ ದರಪಟ್ಟಿ.
5) ದಿನಾಂಕ: 20.12.2003 ರಂದು ಮಾನ್ಯ ಕಾರ್ಯದರ್ಶಿಗಳು, ಗ್ರಾ.ಅ.ಪಂ.ರಾ. ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ ಎಂಎಂಆರ್ ಪ್ರಗತಿ ಪರಿಶೀಲನಾ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದನ್ವಯ.
6) ಕಾರ್ಯದರ್ಶಿಗಳು, ಗ್ರಾಅಪಂರಾ ಇಲಾಖೆ ಇವರ ದಿನಾಂಕ: 21.12.2003ರ ಟಿಪ್ಪಣಿ ಕಂಡಿಕೆ 2 ರಲ್ಲಿ ಅನುಮೋದಿಸಿದಂತೆ.
7) ವ್ಯವಸ್ಥಾಪಕ ನಿರ್ದೇಶಕರು ಮೆ: ಎಂಸಿ ಮತ್ತು ಎಎಲ್, ಮೆಹ್ರಾ ಕಾಂಪ್ಲೆಕ್ಸ್, ನಂ.42, ಮಿಲ್ಲರ್ಸ್ ರಸ್ತೆ, ಬೆಂಗಳೂರು-560052ಗೆ ಬರೆದ ಪತ್ರದ ಸಂಖ್ಯೆ: ಗ್ರಾಅಪ 81 ಸ್ವಜಯೋ 2003, ದಿನಾಂಕ: 24.12.2003 ಹಾಗೂ 02.01.2004.

**ಪ್ರಸ್ತಾವನೆ:**

ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರು ಪ್ರತಿ ಪಂಚವಾರ್ಷಿಕ ಅವಧಿಯ ಪ್ರಾರಂಭದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ಗಣತಿ (ಬಿಪಿಎಲ್) ಯನ್ನು ರಾಷ್ಟ್ರಾದ್ಯಂತ ನಡೆಸುತ್ತಾರೆ. ಇದರಂತೆ ಕೇಂದ್ರ ಸರ್ಕಾರದವರು 10ನೇ ಪಂಚವಾರ್ಷಿಕ ಯೋಜನಾವಧಿಗೆ ವಿಧಾನ ಹಾಗೂ ಗಣತಿಯ ಮಾದರಿ ಅನುಸೂಚಿಯನ್ನು ಉಲ್ಲೇಖ (1) ರಲ್ಲಿ ನೀಡಿರುತ್ತಾರೆ. ಗಣತಿ ಕಾರ್ಯಕ್ಕೆ ಕೇಂದ್ರ ಸರ್ಕಾರವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ಲೆಕ್ಕ ಶೀರ್ಷಿಕೆಯಡಿ ಸಂಪೂರ್ಣ ಹಣವನ್ನು ದಿನಾಂಕ: 21.01.2003 ರಲ್ಲಿ ರೂ.94,00,000-00 (ರೂ.ತೊಂಬತ್ತು ನಾಲ್ಕು ಲಕ್ಷ ಮಾತ್ರ) ಹಾಗೂ 28.03.2003 ರಲ್ಲಿ ರೂ.3,23,77,000-00 (ರೂ.ಮೂರು ಕೋಟಿ ಇಪ್ಪತ್ತಮೂರು ಲಕ್ಷದ ಎಪ್ಪತ್ತೇಳು ಸಾವಿರ ಮಾತ್ರ) ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಎರಡು ಕಂತುಗಳಲ್ಲಿ ಒಟ್ಟು ರೂ.4,17,77,000-00 (ರೂ. ನಾಲ್ಕು ಕೋಟಿ ಹದಿನೇಳು ಲಕ್ಷದ ಎಪ್ಪತ್ತೇಳು ಸಾವಿರ ಮಾತ್ರ) ಹಣ ಬಿಡುಗಡೆ ಮಾಡಿರುತ್ತಾರೆ. ಈ ಮಾದರಿ ಅನುಸೂಚಿಯನ್ನು ಕನ್ನಡ ಭಾಷೆಗೆ ಭಾಷಾಂತರಿಸಲಾಯಿತು. ಕನ್ನಡ ಅನುಸೂಚಿಯನ್ನು ಮುದ್ರಿಸಲು ದರ ಪಟ್ಟಿಯನ್ನು ನೀಡುವಂತೆ ಸರ್ಕಾರಿ ಮುದ್ರಣಾಲಯಕ್ಕೆ ಕೋರಲಾಗಿತ್ತು. ಸರ್ಕಾರಿ ಮುದ್ರಣಾಲಯದವರ ಪತ್ರ ಸಂಖ್ಯೆ: ಪಿ (ಪಿ) 26:2002-2003, ದಿನಾಂಕ: 17.04.2003 ರಲ್ಲಿ 74,30,000 ಲಕ್ಷ ಅರ್ಜಿ ನಮೂನೆ ಮುದ್ರಣ ಹಾಗೂ ಇತರೆ ವೆಚ್ಚಗಳು ರೂ.90,00,000-00 (ರೂ. ತೊಂಬತ್ತು ಲಕ್ಷ ಮಾತ್ರ) ಗಳಾಗಬಹುದೆಂದು ಅಂದಾಜು ಮಾಡಲಾಗಿದೆ. ಪ್ರತಿ ಅರ್ಜಿ ನಮೂನೆಯ ಬೆಲೆ ರೂ.2.00 (ರೂ. ಎರಡು ಮಾತ್ರ) ನಿಗದಿಪಡಿಸಬಹುದಾಗಿದೆ ಎಂದು ತಿಳಿಸಿದ್ದರು. ಮುದ್ರಣ ಕೆಲಸಕ್ಕೆ 61.24 MT A1 ಅಳತೆ (61 x 86 Cms) ಬಿಳಿ ಕಾಗದ ಬೇಕಾಗಿದ್ದು, ಇದನ್ನು ಖರೀದಿಸಿ ಮುದ್ರಣಾಲಯಕ್ಕೆ ಸರಬರಾಜು ಮಾಡಬೇಕೆಂದು ಹಾಗೂ ಇದಕ್ಕೆ ರೂ.22,75,000-00 ಲಕ್ಷ (ರೂ.ಇಪ್ಪತ್ತೆರಡು ಲಕ್ಷದ ಎಪ್ಪತ್ತೈದು ಸಾವಿರ ಮಾತ್ರ) ಗಳಾಗಬಹುದೆಂದು ತಿಳಿಸಿರುತ್ತಾರೆ. ಏತನ್ಮಧ್ಯೆ ರಾಜ್ಯ ಸರ್ಕಾರದಿಂದ ಅನುಷ್ಠಾನಗೊಳಿಸಲಾಗುತ್ತಿರುವ ಅನೇಕ ಯೋಜನೆಗಳಿಗೆ ಉಪಯುಕ್ತವಾಗುವ ಎಲ್ಲಾ ಅಂಶಗಳನ್ನು ಒಳಗೊಂಡ ವಿವಿದ್ದೋದ್ದೇಶ ಸಮೀಕ್ಷೆ ನಡೆಸಬೇಕೆಂದು ಉದ್ದೇಶಿಸಲಾಗಿತ್ತು. ಆದರೆ ಕಾರಣಾಂತರದಿಂದ ಈ ಅಂಶವನ್ನು ಕೈಬಿಟ್ಟು ಕೇಂದ್ರ ಸರ್ಕಾರದವರು ನೀಡಿರುವ ಮಾದರಿ ಅನುಸೂಚಿಯಂತೆಯೇ ಸರ್ವ ಕುಟುಂಬ ಸಮೀಕ್ಷೆ ಗಣತಿ ನಡೆಸಲು ತೀರ್ಮಾನಿಸಲಾಗಿದೆ. ಸದರಿ ಮಾದರಿ ಅನುಸೂಚಿಯನ್ನು ಮುದ್ರಿಸಲು ಸರ್ಕಾರಿ ಮುದ್ರಣಾಲಯದವರನ್ನು ಸಂಪರ್ಕಿಸಿ ಪರಿಷ್ಕೃತ ನಿಖರ ದರಪಟ್ಟಿಯನ್ನು ನೀಡುವಂತೆ ಕೋರಿದ್ದಾಗ್ಯೂ ಈವರೆವಿಗೂ ಅವರಿಂದ ಯಾವುದೇ ಉತ್ತರ ಬಂದಿರುವುದಿಲ್ಲ, ಸರ್ವ ಕುಟುಂಬ ಸಮೀಕ್ಷೆ ಗಣತಿ ಕಾರ್ಯವು ತುರ್ತಾಗಿ ನಡೆಯಬೇಕಾದುದರಿಂದ ಮೆ: ಮಾರ್ಕೆಟಿಂಗ್ ಕನ್ಸಲ್‌ಟೆಂಟ್ಸ್ ಮತ್ತು ಏಜೆನ್ಸಿ ಲಿಮಿಟೆಡ್ (ಎಂಸಿ ಮತ್ತು ಎಎಲ್) (ರಾಜ್ಯ ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟಿದೆ) ಮೆಹ್ರಾ ಕಾಂಪ್ಲೆಕ್ಸ್ ನಂ.42, ಮಿಲ್ಲರ್ಸ್ ರಸ್ತೆ, ಬೆಂಗಳೂರು-560 052 ಇವರನ್ನು ಸಂಪರ್ಕಿಸಲು ಮುದ್ರಣಕ್ಕೆ ತಗಲುವ ಕಾಗದವನ್ನು ಹೊರತುಪಡಿಸಿ ಮುದ್ರಣ ವೆಚ್ಚ ರೂ.14,25,000-00 (ರೂ.ಹದಿನಾಲ್ಕು ಲಕ್ಷ ಇಪ್ಪತ್ತೈದು ಸಾವಿರ ಮಾತ್ರ) ತಿಳಿಸಿರುತ್ತಾರೆ. ಈ ವಿಷಯವನ್ನು ದಿನಾಂಕ: 21.12.2003 ರಂದು ಮಾನ್ಯ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ "ವಿಚಾರ ಮಂಥನ" ಮತ್ತು "ಎಂಎಂಆರ್ ಪ್ರಗತಿ" ಪರಿಶೀಲನಾ ಸಭೆಯಲ್ಲಿ ವಿವರವಾಗಿ ಚರ್ಚಿಸಿ ಒಪ್ಪಿಗೆಯನ್ನು ಪಡೆಯಲಾಗಿರುತ್ತದೆ ಹಾಗೂ ಉಲ್ಲೇಖ (6)ರ ಪ್ರಕಾರ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕಾರ್ಯದರ್ಶಿಯವರು ಅನುಮೋದಿಸಿರುತ್ತಾರೆ. ಈ ಹಿಂದೆ ಸರ್ಕಾರಿ ಮುದ್ರಣಾಲಯದವರು ನೀಡಿದ ಮುದ್ರಣ ವೆಚ್ಚಕ್ಕಿಂತ ಮೆ: ಮಾರ್ಕೆಟಿಂಗ್ ಕನ್ಸಲ್‌ಟೆಂಟ್ಸ್ ಮತ್ತು ಏಜೆನ್ಸಿ ಲಿಮಿಟೆಡ್ (ಎಂಸಿ ಮತ್ತು ಎಎಲ್) ರವರು ನೀಡಿರುವ ದರ ಬಹಳ ಕಡಿಮೆ ಯಿರುವುದರಿಂದ ಹಾಗೂ ರಾಜ್ಯ ಸರ್ಕಾರ ಸ್ವಾಮ್ಯಕ್ಕೆ ಒಳಪಟ್ಟಿರುವುದರಿಂದ ಮೆ: ಮಾರ್ಕೆಟಿಂಗ್ ಕನ್ಸಲ್‌ಟೆಂಟ್ಸ್ ಮತ್ತು ಏಜೆನ್ಸಿ ಲಿಮಿಟೆಡ್

(ಎಂಸಿ ಮತ್ತು ಎಎಲ್) ಮೆಹ್ರಾ ಕಾಂಪ್ಲೆಕ್ಸ್ ನಂ.42, ಮಿಲ್ಲರ್ಸ್ ರಸ್ತೆ, ಬೆಂಗಳೂರು-560 052 ಇವರಿಗೆ ಕೇಂದ್ರ ಸರ್ಕಾರದ ಮಾದರಿ ಅನುಸೂಚಿಯನ್ನು ಕನ್ನಡ ಭಾಷೆಯಲ್ಲಿ ಮುದ್ರಿಸಿ ಜಿಲ್ಲಾ ಪಂಚಾಯತ್‌ಗಳ ಅಗತ್ಯಕ್ಕೆ ತಕ್ಕಂತೆ ಪೂರೈಸಲು ಆದೇಶ ನೀಡಲು ತೀರ್ಮಾನಿಸಲಾಗಿದೆ. ಆದ್ದರಿಂದ ಸರ್ವ ಕುಟುಂಬ ಸಮೀಕ್ಷೆಯ ಮುದ್ರಣ ಕಾರ್ಯವನ್ನು ಮೆ: ಮಾರ್ಕೆಟಿಂಗ್ ಕನ್ಸಲ್‌ಟೆಂಟ್ಸ್ ಮತ್ತು ಏಜೆನ್ಸಿ ಲಿಮಿಟೆಡ್ (ಎಂಸಿ ಮತ್ತು ಎಎಲ್) ಮೆಹ್ರಾ ಕಾಂಪ್ಲೆಕ್ಸ್ ನಂ.42, ಮಿಲ್ಲರ್ಸ್ ರಸ್ತೆ, ಬೆಂಗಳೂರು-560 052 ರವರಿಗೆ ನೀಡಲು ಈ ಆದೇಶ:-

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 81 ಸ್ವಜಯೋ 2003, ಬೆಂಗಳೂರು, ದಿನಾಂಕ: 9ನೇ ಜನವರಿ 2004**

10ನೇ ಪಂಚವಾರ್ಷಿಕ ಯೋಜನಾ ಅವಧಿಯ ಸರ್ವ ಕುಟುಂಬ ಸಮೀಕ್ಷೆ ಗಣತಿಯ ಬಗ್ಗೆ ಮೆ: ಮಾರ್ಕೆಟಿಂಗ್ ಕನ್ಸಲ್‌ಟೆಂಟ್ಸ್ ಮತ್ತು ಏಜೆನ್ಸಿ ಲಿಮಿಟೆಡ್ (ಎಂಸಿ ಮತ್ತು ಎಎಲ್) (ರಾಜ್ಯ ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟಿದೆ) ಮೆಹ್ರಾ ಕಾಂಪ್ಲೆಕ್ಸ್ ನಂ.42, ಮಿಲ್ಲರ್ಸ್ ರಸ್ತೆ, ಬೆಂಗಳೂರು ರವರು ನೀಡಿರುವ ಮುದ್ರಣ ವೆಚ್ಚದ ದರ ಪಟ್ಟಿಯ ಒಟ್ಟು ಹಣ ರೂ.14,84,868-00 (ರೂ. ಹದಿನಾಲ್ಕು ಲಕ್ಷದ ಎಂಬತ್ತನಾಲ್ಕು ಸಾವಿರದ ಎಂಟುನೂರಾ ಅರವತ್ತೆಂಟು ಮಾತ್ರ) ನ್ನು ಒಪ್ಪಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಮುದ್ರಿಸಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ಸರ್ವ ಕುಟುಂಬ ಸಮೀಕ್ಷೆ ಗಣತಿಯ ಒಪ್ಪಿರುವ ಮಾದರಿ ಅನುಸೂಚಿಯನ್ನು ಕನ್ನಡ ಭಾಷೆಯಲ್ಲಿ 75.00 ಲಕ್ಷ (ಎಪ್ಪತ್ತೈದು ಲಕ್ಷ) ಪ್ರತಿಗಳನ್ನು ಮುದ್ರಿಸುವ ವೆಚ್ಚ (ಅಗತ್ಯವಿರುವ ಕಾಗದ ವೆಚ್ಚ ಹಾಗೂ ಸರಬರಾಜು ವೆಚ್ಚ ಹೊರತುಪಡಿಸಿ) | ರೂ. 14,25,000-00 |
| 2. | ಸರ್ವ ಕುಟುಂಬ ಸಮೀಕ್ಷೆ ಕಾರ್ಯದ ರೂಪುರೇಖೆಗಳ 1.00 ಲಕ್ಷ ಪ್ರತಿಗಳ ಮುದ್ರಣ ವೆಚ್ಚ (ಅಗತ್ಯವಿರುವ ಕಾಗದವನ್ನು ಸೇರಿ) | ರೂ. 59,868-00 |
| | **ಒಟ್ಟು** | **ರೂ. 14,84,868-00** |

**ಷರತ್ತುಗಳು:**

1. ಮುದ್ರಣಕ್ಕೆ ಬೇಕಾಗುವ ಕಾಗದವನ್ನು ಮೈಸೂರು ಪೇಪರ್ ಮಿಲ್ಸ್ (ಎಂಪಿಎಂ) ರವರಿಂದ ಪಡೆಯುವುದು. ಇದಕ್ಕೆ ಬೇಕಾಗುವ ಹಣವನ್ನು ಆಯಾ ಜಿಲ್ಲಾ ಪಂಚಾಯತ್‌ಗಳಿಂದ ಈಗಾಗಲೇ ಎಂಪಿಎಂ ಗೆ ಬಿಡುಗಡೆ ಮಾಡಲಾಗಿದೆ.
2. ಕಾಗದದ ವಿಶಿಷ್ಟತೆ ಈ ರೀತಿ ಇರಬೇಕು ಬಿಳಿ ಕಾಗದದ ರೀಲ್ಸ್ - 60 ಜಿಎಸ್‌ಎಂ, ಅಗಲ-89 ಸೆಂ.ಮೀ. ಪರಿಮಾಣ 16.4 ಕೆ.ಜಿ.
3. ಮಾದರಿ ಅನುಸೂಚಿಯನ್ನು ಯಾವುದೇ ಕಾರಣಕ್ಕೂ, ಬದಲಾವಣೆ ಮಾಡುವಂತಿಲ್ಲ, ಮುದ್ರಣ ಅಂದವಾಗಿ ಸ್ಪುಟವಾಗಿರಬೇಕು.
4. ಮಾದರಿ ಅನುಸೂಚಿಯ ಕರಡು ಪ್ರತಿಯನ್ನು ಈ ಇಲಾಖೆಗೆ ತಂದು, ಕರಡು ಪ್ರತಿ ಮೇಲೆ ಮುದ್ರಿಸಬಹುದು ಎಂಬ ಅನುಮತಿಯನ್ನು ಇಲಾಖಾ ಮುಖ್ಯಸ್ಥರಿಂದ ಲಿಖಿತವಾಗಿ ಪಡೆದ ನಂತರವೇ ಮುದ್ರಿಸಬೇಕು.
5. ಸರಬರಾಜಿನಲ್ಲಿ ವಿಳಂಬ, ಮುದ್ರಣದಲ್ಲಿ, ದೋಷ, ಸರಬರಾಜಿನಲ್ಲಿ ವ್ಯತ್ಯಾಸ ಉಪಯೋಗಕ್ಕೆ ಬಾರದ ರೀತಿಯಲ್ಲಿ ಮುದ್ರಿಸಿ ಸರಬರಾಜು ಮಾಡಲ್ಪಟ್ಟರೆ ಅಂತಹ ಅನುಸೂಚಿ ಪ್ರತಿಗಳನ್ನು ತಿರಸ್ಕರಿಸಿ, ಸೂಕ್ತ ದಂಡ ವಿಧಿಸಲಾಗುವುದು ಮತ್ತು ಸದರಿ ಮುದ್ರಕರು ಅಷ್ಟೇ ಸಂಖ್ಯೆಯ ಪ್ರತಿಗಳನ್ನು ತಮ್ಮ ಸ್ವಂತ ಖರ್ಚಿನಲ್ಲೇ ಮರುಮುದ್ರಿಸಿ ಸರಬರಾಜು ಮಾಡಬೇಕು.
6. ಜಿಲ್ಲಾ ಪಂಚಾಯತ್‌ಗಳಿಗೆ ತಲುಪಿಸುವ ವಾಸ್ತವಿಕ ಸಾಗಾಣಿಕಾ ವೆಚ್ಚವನ್ನು ಜಿಲ್ಲಾ ಪಂಚಾಯತ್‌ನಿಂದ ಪಡೆಯುವುದು.
7. ಮುದ್ರಿಸಿದ ನಮೂನೆಗಳನ್ನು ನಿಗದಿತ ಅವಧಿಯೊಳಗೆ ಆಯಾ ಜಿಲ್ಲಾ ಪಂಚಾಯತ್‌ಗಳಿಗೆ ನೇರವಾಗಿ ಸರಬರಾಜು ಮಾಡುವುದು.
8. ಎಣಿಕೆ ಮಾಡಲು ಅನುಕೂಲವಾಗುವಂತೆ 100 ಪ್ರತಿಗಳ ಒಂದೊಂದು ಕಂತೆಗಳನ್ನು ಮಾಡುವುದು.
9. ಸರಬರಾಜು ಮಾಡಿದ ನಂತರ ಮುದ್ರಣ ವೆಚ್ಚ ಹಾಗೂ ಇತರೆ ಅವಶ್ಯ ವೆಚ್ಚದ ಬಿಲ್ಲುಗಳನ್ನು ಪ್ರತ್ಯೇಕವಾಗಿ ತಯಾರಿಸಿ ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳಿಗೆ ನೀಡಿ ಅವರಿಂದ ನೇರವಾಗಿ ಹಣ ಪಡೆಯುವುದು.
10. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಯಾವುದೇ ತರಹದ ವೆಚ್ಚ ಭರಿಸಲು ಅವಕಾಶವಿರುವುದಿಲ್ಲ.
11. ಸಂಬಂಧಿಸಿದ ಮುದ್ರಕರು ಸರ್ಕಾರದಿಂದ ಆಗ್ಗಿಂದಾಗ್ಗೆ ಬಂದಿರುವ ನೀತಿ ನಿಯಮಾವಳಿ : ಆದೇಶಗಳನ್ನು ಪಾಲನೆ ಮಾಡುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಅಪಂರಾ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 10 ಪಿಬಿಎಸ್ 2004, ದಿನಾಂಕ: 09.01.2004 ಹಾಗೂ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ಸಂಖ್ಯೆ: ಗ್ರಾಅಪ 98/2003, ದಿನಾಂಕ: 09.01.2004 ರೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಬಿ. ಮಲ್ಲೇಶ**

ಪಿ.ಆರ್. 108

ನಿರ್ದೇಶಕರು (ಸ್ವಉಕಾ) (ಪ್ರ)

ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಕುಂದುಕೊರತೆಗಳ ಬಗ್ಗೆ ಅಧ್ಯಯನ - ಸಲಹಾ ಸಮಿತಿಯ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸುವ ಬಗ್ಗೆ - ಆದೇಶ.

**ಓದಲಾಗಿದೆ:** 1) ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಸಂಘದ ದಿನಾಂಕ: 19.5.2003ರ ಮನವಿ ಮತ್ತು ಸಂಘದ ಇತರ ಮನವಿಗಳು.

2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 13 ಆಸೇವ 2003, ದಿನಾಂಕ: 22.3.2003.

ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 22.3.2003ರ ಆದೇಶದಲ್ಲಿ ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಕುಂದುಕೊರತೆಗಳನ್ನು ಕುರಿತು ಅಧ್ಯಯನ ನಡೆಸಿ ಸೂಕ್ತ ಶಿಫಾರಸ್ಸನ್ನು ಮಾಡಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಒಂದು ಸಲಹಾ ಸಮಿತಿಯನ್ನು ರಚಿಸಲಾಗಿರುತ್ತದೆ.

ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಸಂಘವು ದಿನಾಂಕ: 19.5.2003ರ ಮನವಿ ಮತ್ತು ತದನಂತರದ ಮನವಿಗಳಲ್ಲಿ ಒಟ್ಟಿಗೆ 10 ಬೇಡಿಕೆಗಳನ್ನು ಸರ್ಕಾರದ ಮುಂದೆ ಮಂಡಿಸಿರುತ್ತದೆ. ಸಂಘದ ಬೇಡಿಕೆಗಳು ಈ ಕೆಳಗಿನಂತಿವೆ:-

| ಕ್ರ.ಸಂ. | ಬೇಡಿಕೆ ವಿವರ |
|---|---|
| 1. | ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ಹುದ್ದೆಗಳ ವೃಂದಬಲವನ್ನು 20 ರಿಂದ 42ಕ್ಕೆ ಹೆಚ್ಚಿಸುವುದು. |
| 2. | ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ಶ್ರೇಣಿಗೆ ಈಗ ನಿಗದಿಪಡಿಸಿರುವ ಜಂಟಿ ಕಾರ್ಯದರ್ಶಿಯ ವೇತನ ಶ್ರೇಣಿ ರೂ.12800-16720ರ ಬದಲಿಗೆ ಅಪರ ಕಾರ್ಯದರ್ಶಿಯ ವೇತನ ಶ್ರೇಣಿ ರೂ.13820-17220 ಕ್ಕೆ ನಿಗದಿಪಡಿಸುವುದು ಮತ್ತು ಕೆ.ಎ.ಎಸ್. ಆಯ್ಕೆ ಶ್ರೇಣಿ ವೃಂದಕ್ಕೆ ಈಗ ನಿಗದಿಪಡಿಸಿರುವ ವೇತನ ಶ್ರೇಣಿ ರೂ.11520-15840ರ ಬದಲಿಗೆ ವೇತನ ಶ್ರೇಣಿ ರೂ.12800-16720 ಕ್ಕೆ ನಿಗದಿಪಡಿಸುವುದು. |
| 3. | ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ವೃಂದಕ್ಕೆ ಬಡ್ತಿ ಹೊಂದಲು ಕೆ.ಎ.ಎಸ್. ಆಯ್ಕೆ ಶ್ರೇಣಿ ವೃಂದದಲ್ಲಿ ಕನಿಷ್ಟ 3 ವರ್ಷಗಳ ಅವಧಿಯ ಬದಲು 1 ವರ್ಷದ ಸೇವೆಯನ್ನು ಮಾತ್ರ ನಿಗದಿಪಡಿಸುವುದು. |
| 4. | ಕೆ.ಎ.ಎಸ್. ಗ್ರೂಪ್-ಎ ಆಯ್ಕೆ ಶ್ರೇಣಿಯಲ್ಲಿ ಈಗ ಇರುವ 54 ಹುದ್ದೆಗಳನ್ನು 108ಕ್ಕೆ ಏರಿಸುವುದು ಹಾಗೂ ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ಶ್ರೇಣಿಯಲ್ಲಿ ಈಗ ಇರುವ 20 ಹುದ್ದೆಗಳನ್ನು 54ಕ್ಕೆ ಏರಿಸುವುದು. |
| 5. | ದೇಶದ ಇತರೇ ರಾಜ್ಯಗಳಲ್ಲಿ ಇರುವಂತೆ ಕರ್ನಾಟಕ ರಾಜ್ಯದಲ್ಲಿಯೂ ಸಹ ಕೆ.ಎ.ಎಸ್. ಅಧಿಕಾರಿಗಳನ್ನು ಜಿಲ್ಲಾಧಿಕಾರಿಗಳನ್ನಾಗಿ ನೇಮಿಸುವುದು. |
| 6. | ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹುದ್ದೆಗಳನ್ನು ಸೂಪರ್ ಟೈಂ ಸ್ಕೇಲ್ ಅಧಿಕಾರಿಗಳ ಬದಲು ಮೊದಲಿದ್ದಂತೆ ಆಯ್ಕೆ ಶ್ರೇಣಿ ಅಧಿಕಾರಿಗಳಿಗೆ ನೀಡುವುದು. |
| 7. | ಎಲ್ಲಾ ಜಿಲ್ಲೆಗಳಲ್ಲಿ ಈ ಹಿಂದೆ ಇದ್ದಂತೆ ವಿಶೇಷ ಜಿಲ್ಲಾಧಿಕಾರಿಗಳ ಹುದ್ದೆಗಳನ್ನು ಪುನಶ್ಚೇತನಗೊಳಿಸುವುದು. |
| 8. | ತಹಶೀಲ್ದಾರ್ ವೃಂದದಲ್ಲಿ ಗ್ರೂಪ್-ಎ ಮತ್ತು ಗ್ರೂಪ್-ಬಿ ಎಂಬ ಎರಡು ವರ್ಗಗಳನ್ನಾಗಿ ಮಾಡಲಾಗಿದ್ದು, ಇದರಿಂದ ತಾರತಮ್ಯವಾಗಿರುವುದರಿಂದ, ಈ ಎರಡೂ ವರ್ಗಗಳನ್ನು ಒಂದುಗೂಡಿಸಿ ಗ್ರೂಪ್-ಸಿ ಎಂದು ಪರಿಗಣಿಸುವುದು. |
| 9. | ತಹಶೀಲ್ದಾರ್ ಮತ್ತು ಅಸಿಸ್ಟೆಂಟ್ ಕಮೀಷನರ್ ಹುದ್ದೆಗಳಿಗೆ ಕ್ರಮಬದ್ಧವಾಗಿ ಪ್ರತಿವರ್ಷವೂ ನೇಮಕಾತಿ ಮಾಡುವುದು. |
| 10. | ರಾಜ್ಯದ ಅಧಿಕಾರಿಗಳಿಗೆ ಐ.ಎ.ಎಸ್. ನಲ್ಲಿ ಶೇಕಡ 50 ರಷ್ಟು ಸ್ಥಾನವನ್ನು ನೀಡುವುದು. |

ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಸಂಘದ ಬೇಡಿಕೆಗಳನ್ನು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿರುವ ಸಲಹಾ ಸಮಿತಿಯು ಸಮಗ್ರವಾಗಿ ಪರಿಶೀಲಿಸಿ ಸರ್ಕಾರಕ್ಕೆ ವರದಿ ನೀಡಿರುತ್ತದೆ. ಈ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 13 ಆಸೇವ 2003, ಬೆಂಗಳೂರು, ದಿನಾಂಕ: 28ನೇ ಜನವರಿ 2004**

ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ಸಲಹಾ ಸಮಿತಿಯು ಮಾಡಿರುವ ಶಿಫಾರಸ್ಸುಗಳನ್ನು ಆಧರಿಸಿ ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಸಂಘ ಸಲ್ಲಿಸಿರುವ ಬೇಡಿಕೆಗಳಲ್ಲಿ ಈ ಕೆಳಗಿನ ಬೇಡಿಕೆಗಳನ್ನು ಸರ್ಕಾರವು ಒಪ್ಪಿಕೊಂಡು ಈ ಮುಂದೆ ತಿಳಿಸಿರುವಂತೆ ಅನುಷ್ಠಾನಗೊಳಿಸಲು ಆದೇಶಿಸಿದೆ.

| | |
|---|---|
| 1. | ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 92 ಆಸೇವ 2001, ದಿನಾಂಕ: 24.12.2002 ಮತ್ತು ದಿನಾಂಕ: 3.5.2003 ರಲ್ಲಿ ಸೃಜಿಸಲಾಗಿರುವ ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ವೃಂದದ ಹುದ್ದೆಗಳ ವೃಂದ ಬಲವನ್ನು ಈಗಿರುವ 20 ರಿಂದ 45ಕ್ಕೆ ಹೆಚ್ಚಿಸಲಾಗಿದೆ. ಈ ವೃಂದಬಲಕ್ಕೆ ಸೇರಿದ ಹೆಚ್ಚುವರಿ ಹುದ್ದೆಗಳನ್ನು (ಇಲಾಖಾ ಮುಖ್ಯಸ್ಥರು ಮತ್ತು ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹುದ್ದೆಗಳು ಒಳಗೊಂಡಂತೆ) ಗುರುತಿಸಿ ಪ್ರತ್ಯೇಕ ಆದೇಶ ಹೊರಡಿಸಲಾಗುವುದು. |
| 2. | ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 92 ಆಸೇವ 2001 ದಿನಾಂಕ: 24.12.2002 ರಲ್ಲಿ ಕೆ.ಎ.ಎಸ್. ಆಯ್ಕೆ ಶ್ರೇಣಿ ವೃಂದ ಬಲವನ್ನು 32 ಹುದ್ದೆಗಳು ಎಂದು ನಿಗದಿಪಡಿಸಿರುವುದನ್ನು ಮಾರ್ಪಡಿಸಿ, ಈ ವೃಂದಬಲವನ್ನು 62 ಹುದ್ದೆಗಳಿಗೆ ಹೆಚ್ಚಿಸಲಾಗಿದೆ. ತತ್ಪರಿಣಾಮವಾಗಿ ಕೆ.ಎ.ಎಸ್. ಹಿರಿಯ ಶ್ರೇಣಿ / ಆಯ್ಕೆ ಶ್ರೇಣಿ ಮತ್ತು ಸೂಪರ್ ಟೈಂ ಸ್ಕೇಲ್ ಹುದ್ದೆಗಳ ವೃಂದಬಲವನ್ನು ಈ ಕೆಳಗಿನಂತೆ ಪರಿಷ್ಕರಿಸಿ ನಿಗದಿಪಡಿಸಲಾಗಿದೆ.<br>ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ 45 ಹುದ್ದೆಗಳು<br>ಕೆ.ಎ.ಎಸ್. ಆಯ್ಕೆ ಶ್ರೇಣಿ 62 ಹುದ್ದೆಗಳು<br>ಕೆ.ಎ.ಎಸ್. ಹಿರಿಯ ಶ್ರೇಣಿ 100 ಹುದ್ದೆಗಳು<br>**ಒಟ್ಟು 207 ಹುದ್ದೆಗಳು** |
| | ಕೆ.ಎ.ಎಸ್.ನ ವಿವಿಧ ವೃಂದಗಳ ವೃಂದಬಲ ನಿಗದಿಪಡಿಸಲು ಪ್ರತಿ 5 ವರ್ಷಗಳಿಗೊಮ್ಮೆ ವೃಂದ ಪರಿಷ್ಕರಣೆ ಮಾಡತಕ್ಕದ್ದು. |
| 3. | ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ವೃಂದದ ವೇತನ ಶ್ರೇಣಿಯನ್ನು ರೂ.12800-16720 ರಿಂದ ರೂ.13820-17220ಕ್ಕೆ ಹಾಗೂ ಕೆ.ಎ.ಎಸ್. ಆಯ್ಕೆ ಶ್ರೇಣಿ ವೃಂದದ ವೇತನ ಶ್ರೇಣಿಯನ್ನು ರೂ.11520-15840 ರಿಂದ ರೂ.12800-16720ಕ್ಕೆ ಹೆಚ್ಚಿಸಿ ನಿಗದಿಪಡಿಸಿದೆ. |

| | |
|---|---|
| 4. | ಕೆ.ಎ.ಎಸ್. ಕಿರಿಯ ಶ್ರೇಣಿ ವೃಂದಕ್ಕೆ ಸೇರಿದಂದಿನಿಂದ ಕನಿಷ್ಠ 20 ವರ್ಷಗಳ ಅರ್ಹತಾದಾಯಕ ಸೇವೆ ಪೂರೈಸಿರುವ ಅಧಿಕಾರಿಗಳು ಮಾತ್ರ ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ವೃಂದಕ್ಕೆ ಬಡ್ತಿಗೆ ಪರಿಗಣಿಸಲು ಅರ್ಹರಾಗುತ್ತಾರೆ. ಕೆ.ಎ.ಎಸ್. ಆಯ್ಕೆ ಶ್ರೇಣಿ ವೃಂದದಿಂದ ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ವೃಂದಕ್ಕೆ ಬಡ್ತಿ ಹೊಂದಲು ಈಗ ನಿಗದಿಪಡಿಸಿರುವ 3 ವರ್ಷಗಳ ಕನಿಷ್ಠ ಸೇವಾ ಅವದಿ ಪೂರೈಸಿರುವ ಅರ್ಹ ಅಧಿಕಾರಿಗಳು ಲಭ್ಯವಿಲ್ಲದಿದ್ದಲ್ಲಿ ಹಾಗೂ ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ವೃಂದಬಲದನುಸಾರ ಹುದ್ದೆಗಳು ಲಭ್ಯವಿದ್ದಲ್ಲಿ 2 ವರ್ಷಗಳ ಅರ್ಹತಾದಾಯಕ ಸೇವೆ ಪೂರೈಸಿರುವ ಅಧಿಕಾರಿಗಳನ್ನು ಬಡ್ತಿಗೆ ಪರಿಗಣಿಸಬಹುದಾಗಿದೆ. |
| 5. | ಕೆ.ಎ.ಎಸ್. ಕಿರಿಯ ಶ್ರೇಣಿ ವೃಂದದ ಸಹಾಯಕ ಆಯುಕ್ತರ ಹುದ್ದೆಗೆ ಇನ್ನು ಮುಂದೆ ಪ್ರತಿವರ್ಷ ಪ್ರಸಕ್ತ 20 ಹುದ್ದೆಗಳ ಬದಲಿಗೆ 30 ಹುದ್ದೆಗಳನ್ನು ನೇರ ನೇಮಕಾತಿಯಿಂದ ನಿಯಮಾನುಸಾರ ಭರ್ತಿ ಮಾಡತಕ್ಕದ್ದು. |

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ: ಆಇ/17/ಸೇ-2/2004, ದಿನಾಂಕ: 21.1.2004 ರಲ್ಲಿ ನೀಡಿರುವ ಅಭಿಪ್ರಾಯವನ್ನು ಗಮನಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 109

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಲಭ್ಯವಿರುವ ನಿರ್ಜೀವ ಮತ್ತು ಒಣಗಿದ ಬೊಂಬುಗಳನ್ನು ಹೊರ ರಾಜ್ಯದ ಕೈಗಾರಿಕೆಗಳಿಗೆ ಪೂರೈಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಕ್ರಮಾಂಕ: ಅಪಜೀ 51 ಎಫ್‌ಡಿಪಿ 2001, ದಿನಾಂಕ: 11.03.2003.
2) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ, ಬೆಂಗಳೂರು ಇವರ ಕ್ರಮಾಂಕ: ಟಿಇಸಿ.ಐ.ಸಿಆರ್-12/2003-04, ದಿನಾಂಕ: 14/19.11.2003ರ ಪತ್ರ.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕೊಪ್ಪ, ಚಿಕ್ಕಮಗಳೂರು, ಭದ್ರಾವತಿ, ಶಿವಮೊಗ್ಗ, ಸಾಗರ, ಹುಣಸೂರು ಮತ್ತು ಬೆಂಗಳೂರು ವಿಭಾಗಗಳಲ್ಲಿನ ಒಣಗಿದ ಮತ್ತು ನಿರ್ಜೀವ ಬೊಂಬುಗಳನ್ನು 2002-03 ಮತ್ತು 2003-04ನೇ ಸಾಲಿನಲ್ಲಿ ತೆಗೆದು ಭದ್ರಾವತಿಯಲ್ಲಿರುವ ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತಕ್ಕೆ ಸರಬರಾಜು ಮಾಡಲು ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತ, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ ಮತ್ತು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತಗಳಿಗೆ ಹಂಚಿಕೆ ಮಾಡಿ ಆದೇಶಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ, ಬೆಂಗಳೂರು ಇವರು ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತವು ಸಾಕಷ್ಟು ಪ್ರಮಾಣದಲ್ಲಿ ಬೊಂಬಿನ ದಾಸ್ತಾನನ್ನು ಹೊಂದಿದ್ದು, ಅರಣ್ಯದಲ್ಲಿ ಹೂ ಬಿಟ್ಟಿರುವ ಬೊಂಬಿನ ಸಾಮಗ್ರಿಯು ಹೆಚ್ಚಿನ ಪ್ರಮಾಣದಲ್ಲಿ ಲಭ್ಯವಿದ್ದು, ಇದನ್ನು ಮೆ: ಮೈಸೂರು ಕಾಗದ ಕಾರ್ಖಾನೆಗೆ ಮಾತ್ರ ಪೂರೈಸುವುದಾದರೆ ಲಭ್ಯವಿರುವ ಪ್ರಮಾಣದಷ್ಟು ಬೊಂಬನ್ನು ಕತರಾವಣೆ ಮಾಡಲು ನಿಗಮಕ್ಕೆ ಸಾಧ್ಯವಾಗುವುದಿಲ್ಲ ಹಾಗೂ ಅರಣ್ಯದಲ್ಲಿರುವ ಒಣಗಿದ ಮತ್ತು ಹೂಬಿಟ್ಟ ಬೊಂಬನ್ನು ಅರಣ್ಯ ನಿರ್ವಹಣೆಯ ದೃಷ್ಟಿಯಿಂದ ತೆಗೆಯುವುದು ಅತ್ಯವಶ್ಯವಾಗಿದ್ದು ಅವುಗಳನ್ನು ರಾಜ್ಯದ ಹೊರಗಡೆಯಿರುವ ಅವಶ್ಯಕತೆಯಿರುವ ಕೈಗಾರಿಕೆಗಳಿಗೆ ಪೂರೈಸಲು ಸರ್ಕಾರದ ಆದೇಶವನ್ನು ಕೋರಿರುವರು. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 51 ಎಫ್‌ಡಿಪಿ 2001, ಬೆಂಗಳೂರು, ದಿನಾಂಕ: 27ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಅರಣ್ಯಗಳಲ್ಲಿ ಲಭ್ಯವಿರುವ ನಿರ್ಜೀವ ಬೊಂಬುಗಳನ್ನು ಆದಷ್ಟು ಬೇಗನೆ ತೆಗೆಯುವ ಸಲುವಾಗಿ ಅರಣ್ಯಗಳಿಂದ ನಿರ್ಜೀವ ಮತ್ತು ಹೂ ಬಿಟ್ಟ ಬೊಂಬುಗಳನ್ನು ಕಡಿತಲೆ ಮಾಡಿ ಅದನ್ನು ಹೊರರಾಜ್ಯಗಳಲ್ಲಿನ ಕೈಗಾರಿಕೆಗಳಿಗೆ ಒದಗಿಸಲು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ ಮತ್ತು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತಗಳಿಗೆ ಸರ್ಕಾರವು ಅನುಮತಿಯನ್ನು ನೀಡಿದೆ.

ಈ ಸಂಬಂಧ ಕಡಿತಲೆ ಶುಲ್ಕ ಟನ್ ಒಂದಕ್ಕೆ ರೂ.500.00 (ರೂಪಾಯಿಗಳು ಐದು ನೂರು ಮಾತ್ರ) ರಂತೆ ನಿಗಮಗಳು ಸರ್ಕಾರಕ್ಕೆ ಪಾವತಿಸುವುದು.

ಇದು ದಾಸ್ತಾನನ್ನು ತೀರಿಸಲು ಒಂದೇ ಸಲದ ತೀರ್ಮಾನವಾಗಿರುತ್ತದೆ (This will be one time decision to clear the quantity).

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ವಿ. ಜಯಲಕ್ಷ್ಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್. 110

**ಸಹಕಾರ ಸಚಿವಾಲಯ**

**ವಿಷಯ:** ಅಧಿಸೂಚಿತ ಕೃಷಿ ಉತ್ಪನ್ನಗಳಾದ ಈರುಳ್ಳಿ, ಆಲೂಗಡ್ಡೆ ಮತ್ತು ಟೊಮ್ಯಾಟೋಗಳಿಗೆ ಮಾರುಕಟ್ಟೆ ಶುಲ್ಕ ಹೆಚ್ಚುವರಿಯಿಂದ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಇ 277 ಎಂಆರ್ಇ 2002(ಭಾಗ), ದಿನಾಂಕ: 23.09.2003.

2) ಅಧ್ಯಕ್ಷರು, ಬೆಂಗಳೂರು ಆಲೂಗಡ್ಡೆ ಮತ್ತು ಈರುಳ್ಳಿ ವರ್ತಕರ ಸಂಘ (ರಿ), ಇವರ ಮನವಿ ಪತ್ರ ದಿನಾಂಕ: 04.12.2003.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ: 23.09.2003ರ ಆದೇಶಾನುಸಾರ ಆವರ್ತನಿಧಿಗೆ ಹೆಚ್ಚಿನ ಸಂಪನ್ಮೂಲಗಳನ್ನು ಕ್ರೋಢೀಕರಿಸಲು ಅನುಕೂಲವಾಗುವಂತೆ, ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಅಧಿನಿಯಮ, 1966ರ ಕಲಂ 65ರ ಉಪಕಲಂ (2) ರನ್ವಯ ಕೃಷಿ ಮಾರುಕಟ್ಟೆ ಶುಲ್ಕವನ್ನು ಶೇ.1 ರಿಂದ ಶೇ.1.5ಕ್ಕೆ ಹೆಚ್ಚಿಸಲಾಗಿತ್ತು.

ಅಧ್ಯಕ್ಷರು, ಬೆಂಗಳೂರು ಆಲೂಗಡ್ಡೆ ಮತ್ತು ಈರುಳ್ಳಿ ವರ್ತಕರ ಸಂಘ (ರಿ), ಇವರು ಮೇಲೆ ಕ್ರಮಾಂಕ: (2) ರಲ್ಲಿ ಓದಲಾದ ದಿನಾಂಕ: 04.12.2003ರ ಮನವಿ ಪತ್ರದಲ್ಲಿ ಈ ನಿರ್ಧಾರದಿಂದ ರೈತರಿಗೂ ಹಾಗೂ ಖರೀದಿದಾರರಿಗೂ ಬಹಳ ಅನಾನುಕೂಲ ವಾಗುವುದಾಗಿ ತಿಳಿಸಿರುತ್ತಾರೆ. ರಾಜ್ಯದಲ್ಲಿನ ಖರೀದಿದಾರನ ಮೇಲೆ ಕಮಿಷನ್ ಶೇ.5, ಮಾರುಕಟ್ಟೆ ಶುಲ್ಕ ಶೇ.1 ಹಾಗೂ ಹಮಾಲಿ ಶೇ.1.70 ಬೀಳುವುದರಿಂದ ಇದನ್ನು ಮನಗಂಡ ಖರೀದಿದಾರನು ಕೊಳ್ಳುವಾಗ ಬೆಲೆಯನ್ನು ಕಡಿಮೆ ಕೇಳುವುದರಿಂದ ರೈತರಿಗೆ ಒಂದು ಮೂಟೆಗೆ ರೂ.50-100 ಗಳು ಕಡಿಮೆಯಾಗುತ್ತಿದ್ದು, ಆಲೂಗಡ್ಡೆ, ಈರುಳ್ಳಿ, ಬೆಳ್ಳುಳ್ಳಿ, ಶುಂಠಿ ಮುಂತಾದ ಕೃಷಿ ಉತ್ಪನ್ನಗಳು ಬೇಗ ಕೊಳೆತುಹೋಗುವ ಪದಾರ್ಥಗಳಾಗಿರುವ ಕಾರಣ ಈಗ ಹೆಚ್ಚಿಸಿರುವ ಶೇ.0.50 ಗಳ ಮಾರುಕಟ್ಟೆ ಶುಲ್ಕವನ್ನು ಕಡಿಮೆಮಾಡಿ ಈ ಹಿಂದೆ ಇದ್ದಂತೆ ಶೇ.1ರ ಮಾರುಕಟ್ಟೆ ಶುಲ್ಕವನ್ನು ನಿಗದಿಪಡಿಸಬೇಕೆಂದು ಕೋರಿರುತ್ತಾರೆ.

ಈ ಬಗ್ಗೆ ಸಮಗ್ರವಾಗಿ ಪರಿಶೀಲಿಸಿದ ಸರ್ಕಾರವು ಈರುಳ್ಳಿ, ಆಲೂಗಡ್ಡೆ ಮತ್ತು ಟೊಮ್ಯಾಟೋಗಳಿಗೆ ಮಾರುಕಟ್ಟೆ ಶುಲ್ಕ ಹೆಚ್ಚುವರಿಯಿಂದ ವಿನಾಯಿತಿ ನೀಡುವುದು ಸೂಕ್ತವೆಂದು ಪರಿಗಣಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಇ 374 ಎಂಆರ್ಇ 2003, ಬೆಂಗಳೂರು, ದಿನಾಂಕ: 9ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಈರುಳ್ಳಿ, ಆಲೂಗಡ್ಡೆ ಮತ್ತು ಟೊಮ್ಯಾಟೋಗಳಿಗೆ ಮಾತ್ರ, ತಕ್ಷಣದಿಂದ ಅನ್ವಯಿಸುವಂತೆ ಮತ್ತು ಮುಂದಿನ ಆದೇಶದವರೆವಿಗೂ, ಸರ್ಕಾರದ ಆದೇಶ ಸಂಖ್ಯೆ: ಸಇ 277 ಎಂಆರ್ಇ 2002 (ಭಾಗ), ದಿನಾಂಕ: 23.09.2003ರ ಆದೇಶಾನುಸಾರ ಮಾರುಕಟ್ಟೆ ಶುಲ್ಕ ಹೆಚ್ಚುವರಿಯಿಂದ ವಿನಾಯಿತಿ ನೀಡಲಾಗಿದ್ದು ಸದರಿ ಕೃಷಿ ಉತ್ಪನ್ನಗಳಿಗೆ ಶೇಕಡ 1 ರಷ್ಟು ಮಾತ್ರ ಮಾರುಕಟ್ಟೆ ಶುಲ್ಕ ವಿಧಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಾಯ್ಸ್ ಸುರೇಂದ್ರ**

ಪಿ.ಆರ್. 113 ಸರ್ಕಾರದ ಉಪ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಬೆಂಗಳೂರು ಟೆಲಿಗ್ರಾಫ್ ಇಂಜಿನಿಯರಿಂಗ್ ಎಂಪ್ಲಾಯಿಸ್ ಕೋ-ಅಪರೇಟಿವ್ ಸೊಸೈಟಿ ಲಿ, ಬೆಂಗಳೂರು ಇಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಬಗ್ಗೆ ಕಾಯ್ದೆ ಕಲಂ 64ರ ವಿಚಾರಣೆ ಕುರಿತಂತೆ ಕಾಲಾವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಜಂಟಿ ನಿಬಂಧಕರು (ಪಟ್ಟಣ ಬ್ಯಾಂಕುಗಳ ವಿಭಾಗ) ಇವರ ಪತ್ರ ಸಂಖ್ಯೆ: ಯುಬಿಸಿ 38 ಯುಎಂಸಿ 96-97 ದಿನಾಂಕ: 7.5.2003 ಹಾಗೂ 13.8.2003.

**ಪ್ರಸ್ತಾವನೆ:**

ಸಹಕಾರ ಸಂಘಗಳ ಜಂಟಿ ನಿಬಂಧಕರು (ಪಟ್ಟಣ ಬ್ಯಾಂಕುಗಳ ವಿಭಾಗ) ಬೆಂಗಳೂರು ಇವರು ಬೆಂಗಳೂರು ಟೆಲಿಗ್ರಾಫ್ ಇಂಜಿನಿಯರಿಂಗ್ ಎಂಪ್ಲಾಯೀಸ್ ಕೋ-ಆಪರೇಟಿವ್ ಸೊಸೈಟಿ ಲಿ, ಬೆಂಗಳೂರು ಇವರ ವಿಚಾರಣಾ ಅವಧಿಯನ್ನು ದಿನಾಂಕ: 21.3.2003 ರಂದು ಆದೇಶಿಸಿದ್ದು, ದಿನಾಂಕ: 20.3.2003ಕ್ಕೆ ಒಂದು ವರ್ಷ ಪೂರ್ಣಗೊಂಡಿದ್ದು ಸಹಕಾರ ಸಂಘಗಳ ಕಾಯ್ದೆ ಕಲಂ 1959ರ ಕಲಂ 121 ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಾಯಿದೆ ಕಲಂ 64(2ಎ) ಪ್ರಕಾರ ವಿಚಾರಣಾ ಅವಧಿಯನ್ನು ದಿನಾಂಕ: 20.6.2003ರ ವರೆಗೆ ವಿಸ್ತರಿಸಲು ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ. ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಶೀಲಿಸಿ, ಕಾಲಾವಧಿಯನ್ನು ವಿಸ್ತರಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 107 ಸಿಎಲ್ಎಂ 2003, ಬೆಂಗಳೂರು, ದಿನಾಂಕ: 5ನೇ ಡಿಸೆಂಬರ್ 2003**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ 121ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮ ಕಲಂ 64ರ ಪ್ರಕರಣವನ್ನು ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಬೆಂಗಳೂರು ಟೆಲಿಗ್ರಾಫ್ ಇಂಜಿನಿಯರಿಂಗ್ ಎಂಪ್ಲಾಯೀಸ್ ಕೋ-ಆಪರೇಟಿವ್ ಸೊಸೈಟಿ ಲಿ, ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ. ಎಂದರೆ,

**64ರ ಪ್ರಕರಣದಲ್ಲಿ:-**

(2ಎ)ನೇ ಪ್ರಕರಣದಲ್ಲಿರುವ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಒಂದು ವರ್ಷ" ಎಂಬ ಪದಗಳನ್ನು ಸೇರಿಸತಕ್ಕದ್ದು.

**ಸೂಚನೆ:-**

64(2ಎ)ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 20.12.2003ರ ವರೆಗೆ ಜಾರಿಯಲ್ಲಿರತಕ್ಕದ್ದು ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 64(2ಎ)ಕ್ಕೆ ಉಪ ಪ್ರಕರಣದ / ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು, ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 114 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ವೈ.ಬಿ. ಕೃಷ್ಣ, ಹಿಂದಿನ ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ರವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಉಲ್ಲೇಖ:** 1) ಐಜಿಪಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಅ:ತನಿಖೆ:ಪೊವಿ:ಜಿಡಿ-6: ಪ್ರಸಂ-4:03:ಕೆಎಲ್ಆರ್, ದಿನಾಂಕ: 8.9.2003.

2) ತನಿಖಾಧಿಕಾರಿಯ ವರದಿ ಸಂಖ್ಯೆ: ಇಲ್ಲ, ದಿನಾಂಕ: 4.8.2003.

3) ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಕರಣದ ಸಾರಂಶ:**

ಶ್ರೀ ವೈ.ಬಿ. ಕೃಷ್ಣ, ಹಿಂದಿನ ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಇವರ ವಿರುದ್ಧ ಗುನ್ನೆ ಸಂಖ್ಯೆ: 04:03 ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಕೋಲಾರ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ:2,3) ಪೊಲೀಸ್ ಮಹಾ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ: 08.09.2003 (ಉಲ್ಲೇಖ-1) ರೊಡನೆ ಕಳುಹಿಸುತ್ತಾ ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19ನೆಯ ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

"ಸಕ್ಷಮ ಪ್ರಾಧಿಕಾರಿಯಾದ ನಾನು, ಶ್ರೀ ಹೆಚ್.ಸಿ. ಶ್ರೀಕಂಠಯ್ಯ, ಕಂದಾಯ ಸಚಿವರು, ಐಜಿಪಿ ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖಿತ ಪತ್ರ ಸಂಖ್ಯೆ: ಲೋಅ:ತನಿಖೆ:ಪೊವಿ:ಬಿಡಿ-6:ಪ್ರಸಂ-4:03:ಕೆಎಲ್ಆರ್, ದಿನಾಂಕ: 08.09.2003 ರೊಂದಿಗೆ ಕಳುಹಿಸಿಕೊಟ್ಟ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದ್ದೇನೆ:-

ಅ) ಶ್ರೀ ಎಸ್. ಗೋಪಾಲಕೃಷ್ಣ ಬಿನ್ ನಂಜುಂಡಪ್ಪ (ಲೇಟ್), ಜನ್ನಘಟ್ಟ ಗ್ರಾಮ, ಕೋಲಾರ ತಾಲ್ಲೂಕು ರವರ ಫಿರ್ಯಾದಿ ದಿನಾಂಕ: 27.06.2003.

ಆ) ಪ್ರಥಮ ವರ್ತಮಾನ ವರದಿ ಕೋಲಾರ, ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ: 04:2003.

ಇ) ಪ್ರಾಯೋಗಿಕ ಪಂಚನಾಮೆ ದಿನಾಂಕ: 27.06.2003.

ಈ) ಟ್ರ್ಯಾಪನ ಮಹಜರ್ ದಿನಾಂಕ: 27.06.2003.

ಉ) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಸಿಎಂಇ:ಇಎಕ್ಸ್. ನಂ: ಸಿಎಂಇ:ಲೋಕ್:14:2003-04, ದಿನಾಂಕ: 08.07.2003.

ಊ) ಕೃತ್ಯ ನಡೆದ ಸ್ಥಳದ ನಕಾಶೆ : ಲಗತ್ತಿಸಿದೆ.

ಋ) ಸಾಕ್ಷಿಗಳ ಹೇಳಿಕೆಗಳು:

1) ಎನ್. ಗೋಪಾಲಕೃಷ್ಣ
2) ಎನ್.ಇ. ಮುದ್ದೇಗೌಡ
3) ಎಂ. ಸೋಮಶೇಖರ್
4) ಈಶ್ವರಪ್ಪ
5) ದತ್ತಾತ್ರೇಯ
6) ಎಸ್.ಎ.ಪಿ. ಖಾದ್ರಿ
7) ಮುಷ್ತಾತ ಅಹ್ಮದ್
8) ನಂಜುಂಡಯ್ಯ
9) ಎಂ. ಭೀಮಯ್ಯ
10) ನಾರಾಯಣಸ್ವಾಮಿ
11) ಎನ್. ವೆಂಕಟಾಚಲಯ್ಯ
12) ಎನ್.ಟಿ. ಅಶ್ವತ್ಥನಾರಾಯಣ್

ಎ) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ: ಎಎಲ್ಎನ್:ಸಿಆರ್:7:03-04.

ಏ) ಆಪಾದಿತರ ಸಮಜಾಯಿಷಿ ಹೇಳಿಕೆಗಳು ಶ್ರೀ ವೈ.ಬಿ. ಕೃಷ್ಣ, ದಿನಾಂಕ: 27.06.2003.

ತನಿಖಾಧಿಕಾರಿಗಳಾದ ಶ್ರೀ ಎನ್.ಜಿ. ಅಶ್ವತ್ಥನಾರಾಯಣ, ಆರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಕೋಲಾರ ಜಿಲ್ಲೆ, ಕೋಲಾರ ಇವರು ಶ್ರೀ ವೈ.ಬಿ. ಕೃಷ್ಣ, ಹಿಂದಿನ ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಇವರ ವಿರುದ್ಧ ದಂಡಾರ್ಹ

ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ಕೋಲಾರ ಆರಕ್ಷಕ ಠಾಣೆಯಲ್ಲಿ ಗುನ್ಹೆ ಸಂಖ್ಯೆ: 04:2003 ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರು ಶ್ರೀ ವೈ.ಬಿ. ಕೃಷ್ಣ, ಹಿಂದಿನ ತಹಶೀಲ್ದಾರ್, ಕೋಲಾರ ಇವರು ಫಿರ್ಯಾದಿಯಾದ ಶ್ರೀ ಎಸ್. ಗೋಪಾಲಕೃಷ್ಣ ಬಿನ್ ನಂಜುಂಡಪ್ಪ (ಲೇಟ್), ಜನ್ನಘಟ್ಟ ಗ್ರಾಮ, ಕೋಲಾರ ತಾಲ್ಲೂಕು ಇವರ ಚಿಕ್ಕಪ್ಪನವರ ಹೆಸರಿನಲ್ಲಿರುವ ಜಮೀನಿನಲ್ಲಿ ಇಟ್ಟಿಗೆ ಕಾರ್ಖಾನೆಯನ್ನು ಸ್ಥಾಪಿಸಲು ಭೂ ಪರಿವರ್ತನೆ ಮಾಡುವ ಸರ್ಕಾರಿ ಕೆಲಸವನ್ನು ಮಾಡಲು ರೂ.20,000/-ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ: 27.6.2003 ರಂದು ಕೋಲಾರದಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ವೈ.ಬಿ. ಕೃಷ್ಣ, ಹಿಂದಿನ ತಹಶೀಲ್ದಾರ್, ಕೋಲಾರ ಇವರು ಅಕ್ರಮ ಸಂಭಾವನೆಯಿಂದ 10,000/- ರೂ.ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸರ್ಕಾರಿ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೊನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಫ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.10,000/- ರೂ.ಗಳನ್ನು ಶ್ರೀ ವೈ.ಬಿ. ಕೃಷ್ಣ ರಿಂದ ಕೋಲಾರದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1) (ಡಿ) ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ನನಗೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚನಿರೋಧಕ ಕಾಯ್ದೆ 1988ರ ಅನ್ವಯ ಕಲಂ 7, 13(1) (ಡಿ) ಮತ್ತು ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ನಾನು ಮನಗಂಡಿದ್ದೇನೆ.

ಸಕ್ಷಮ ಪ್ರಾಧಿಕಾರನಾದ ನಾನು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳವನಾಗಿರುತ್ತೇನೆ ಹಾಗೂ ಈ ಬಗ್ಗೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 8 ರಡಿಯಲ್ಲಿ ಸಕ್ಷಮ ಪ್ರಾಧಿಕಾರಿಯಾಗಿರುತ್ತೇನೆ. ಆದ್ದರಿಂದ, ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ)ರ ಅಡಿ ಆಪಾದಿತ ನೌಕರನಾದ ಶ್ರೀ ವೈ.ಬಿ. ಕೃಷ್ಣ, ಹಿಂದಿನ ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ರವರನ್ನು ಕಲಂ 7 ಮತ್ತು 13(1) (ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ನಾನು ಹೊಂದಿರುತ್ತೇನೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 21 ಎಡಿಇ 2003, ಬೆಂಗಳೂರು, ದಿನಾಂಕ: 28ನೇ ಜನವರಿ 2004**

ಆರೋಪಿಯಾದ ಶ್ರೀ ವೈ.ಬಿ. ಕೃಷ್ಣ, ಹಿಂದಿನ ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಇವರನ್ನು ಹುದ್ದೆಯಿಂದ ತೆಗೆದು ಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರನಾದ ನಾನು, ಹೆಚ್.ಸಿ. ಶ್ರೀಕಂಠಯ್ಯ, ಕಂದಾಯ ಸಚಿವರು, ಕರ್ನಾಟಕ ಸರ್ಕಾರ, ಶ್ರೀ ವೈ.ಬಿ. ಕೃಷ್ಣ, ಹಿಂದಿನ ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಇವರನ್ನು ಲಂಚ ನಿರೋಧಕ ಕಾಯ್ದೆ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡುತ್ತಿದ್ದೇನೆ.

ಮುಂದುವರಿದು, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ಅಥವಾ ಲೇಖಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕು ಅಥವಾ ಹೊರಡಿಸುವಂತೆ ಮಾಡಬೇಕು.

ಅದೇ ನಿಯಮಾವಳಿಯ ನಿಯಮ 19(1)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿದ ಆದೇಶಗಳು ಮತ್ತು ಲೇಖಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 28.01.2004 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಪಿ.ಆರ್. 116 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎನ್.ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ: ಸಿಆಸುಇ 67 ಎಸ್‌ಇಎನ್ 97, ದಿನಾಂಕ: 10.01.2002.

2) ಶ್ರೀ ಎನ್.ಎಂ. ನೀಲಕಂಠ, ಕೆಎಎಸ್ ರವರ ದಿನಾಂಕ: 21.07.03ರ ಉತ್ತರ.

**ಪ್ರಸ್ತಾವನೆ:**

ಕೃಷ್ಣ ಮೇಲ್ದಂಡೆ ಯೋಜನೆ ನಾರಾಯಣಪುರದಲ್ಲಿ ಪುನರ್ವಸತಿ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಯೋಜನೆ ವಿಸ್ತರಣೆಯಿಂದ ನಿರಾಶ್ರಿತಗೊಂಡ ಸಂತ್ರಸ್ಥರಿಗೆ ನೀಡಲಾದ ಪರಿಹಾರ ಧನ ವಿತರಣೆಯಲ್ಲಿ ಹಣದ ದುರುಪಯೋಗ, ಸರ್ಕಾರಿ ಕೆಲಸದಲ್ಲಿ ನಿರ್ಲಕ್ಷತನ ತೋರಿದ ಮುಂತಾದ ಆರೋಪಗಳಿಗಾಗಿ ಶ್ರೀ ಎನ್.ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ) ಇವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 10.01.2002ರ ನೋಟೀಸ್‌ನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 21.07.2003ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿಯು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 67 ಎಸ್‌ಇಎನ್ 97, ಬೆಂಗಳೂರು, ದಿನಾಂಕ: 29ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ, ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎನ್.ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ನಡೆಸಲು ಶ್ರೀ ಬಿ. ಶ್ರೀನಿವಾಸರಾವ್, ನಿವೃತ್ತ ನ್ಯಾಯಾಧೀಶರು, ಮೈಸೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ರೂ.5000-00 ಗೌರವಧನ ಹಾಗೂ ರೂ.1000-00 ಪ್ರಯಾಣ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಉಪ ವಿಭಾಗಾಧಿಕಾರಿ, ಮೈಸೂರು ಉಪ ವಿಭಾಗ, ಮೈಸೂರು, ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಉಪ ವಿಭಾಗಾಧಿಕಾರಿ ಮೈಸೂರುರವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 117

**INFORMATION TECHNOLOGY & BIOTECHNOLOGY SECRETARIAT**

**CORRIGENDUM**

**NO. ITD 122 ADM 2003, BANGALORE, DATED: 30th January 2004.**

The name **'IT Education Standards Board'** wherever appearing and referred in the G.O.No. ITD 25 PRM 2000, dated: 17.06.2000 shall be deemed to have been substituted by the name **'Board for Information Technology Education Standards (BITES).**

By Order and in the Name of the Governor of Karnataka,
**K.M. ANANDA**
Under Secretary to Government,
Department of Information Technology & Biotechnology.

PR-115

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳ ಮತ್ತು ನೌಕರರ ಹಾಗೂ ಪೌರಸೇವಾ ನೌಕರರ ರಹಸ್ಯ ವರದಿಗಳನ್ನು ಬರೆಯುವ ಪ್ರಾಧಿಕಾರಗಳನ್ನು ಗೊತ್ತುಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ನಅಇ 78 ಇಎಂಸಿ 89, ದಿನಾಂಕ: 24.1.90.
2) ಸರ್ಕಾರದ ಆದೇಶ ಸಂಖ್ಯೆ: ನಅಇ 92 ಇಎಂಸಿ 92, ದಿನಾಂಕ: 20.2.93.
3) ಕಡತ ಸಂಖ್ಯೆ: ಪೌನಿ(ವ್ಯ)(ಎಸ್):17:2002-03 ರಲ್ಲಿ ಪೌರಾಡಳಿತ ನಿರ್ದೇಶಕರ ಪ್ರಸ್ತಾವನೆ:

**ಪ್ರಸ್ತಾವನೆ:**

ನಗರಸಭೆಗಳು ಮತ್ತು ಪುರಸಭೆಗಳಲ್ಲಿ ಕರ್ತವ್ಯ ನಿರ್ವಹಿಸುವ ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳು ಮತ್ತು ನೌಕರರು ಹಾಗೂ ಪೌರಸೇವಾ ನೌಕರರುಗಳ ರಹಸ್ಯ ವರದಿಗಳನ್ನು ಬರೆಯುವ ಪ್ರಾಧಿಕಾರಗಳನ್ನು ಕ್ರಮವಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ: (2) ಮತ್ತು (1) ರಲ್ಲಿನ ಸರ್ಕಾರದ ಆದೇಶಗಳಲ್ಲಿ ಗುರುತಿಸಿ ಆದೇಶಿಸಲಾಗಿತ್ತು. ಈ ಪ್ರಾಧಿಕಾರಗಳಲ್ಲಿ ಕೆಲವು ಬದಲಾವಣೆಗಳು ಅವಶ್ಯಕವಿರುವುದಾಗಿ ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಕಡತದಲ್ಲಿ ಪೌರಾಡಳಿತ ನಿರ್ದೇಶಕರು ತಿಳಿಸುತ್ತಾ, ಅದರಂತೆ ಈ ಅಧಿಕಾರಿಗಳು ಹಾಗೂ ನೌಕರರ ರಹಸ್ಯ ವರದಿಗಳನ್ನು ಬರೆಯುವ ಸಂಬಂಧ ವರದಿ ಮಾಡುವ ಪ್ರಾಧಿಕಾರ : ಪರಿಶೀಲನಾ ಪ್ರಾಧಿಕಾರ ಮತ್ತು ಅಂಗೀಕರಿಸುವ ಪ್ರಾಧಿಕಾರಗಳನ್ನು ಹೊಸದಾಗಿ ಗುರುತಿಸಿ ಪರಿಷ್ಕೃತ ಆದೇಶ ಹೊರಡಿಸಲು ಸರ್ಕಾರವನ್ನು ವಿನಂತಿಸಿರುತ್ತಾರೆ.

ಸರ್ಕಾರವು ಪೌರಾಡಳಿತ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ನಗರಸಭೆಗಳು ಮತ್ತು ಪುರಸಭೆಗಳಲ್ಲಿ ಕರ್ತವ್ಯ ನಿರ್ವಹಿಸುವ ಅಧಿಕಾರಿ ಮತ್ತು ನೌಕರರುಗಳಲ್ಲದೆ ನಗರಾಭಿವೃದ್ಧಿ ಪ್ರಾಧಿಕಾರಗಳಲ್ಲಿ ಹಾಗೂ ನಗರಾಭಿವೃದ್ಧಿ ಕೋಶಗಳಲ್ಲಿ ಕರ್ತವ್ಯ

ನಿರ್ವಹಿಸುವ ಕರ್ನಾಟಕ ಪೌರಾಡಳಿತ ಸೇವೆಗೆ ಸೇರಿದ ಅಧಿಕಾರಿಗಳ ರಹಸ್ಯ ವರದಿಗಳನ್ನು ಬರೆಯುವ ಪ್ರಾಧಿಕಾರಗಳನ್ನೂ ಸಹ ಗುರುತಿಸಿ ಆದೇಶ ಹೊರಡಿಸಲು ನಿರ್ಣಯಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 34 ಇಎಂಸಿ 2003, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದ, ಮೇಲೆ ಕ್ರ.ಸಂ. (1) ಮತ್ತು (2) ರಲ್ಲಿ ಓದಲಾದ ಸರ್ಕಾರದ ಆದೇಶಗಳನ್ನು ಭಾಗಶಃ ಮಾರ್ಪಡಿಸಿ ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳು ಮತ್ತು ನೌಕರರು ಹಾಗೂ ಪೌರಸೇವಾ ನೌಕರರ ರಹಸ್ಯ ವರದಿಗಳನ್ನು ಬರೆಯುವ ಸಂಬಂಧ ವರದಿ ಮಾಡುವ ಪ್ರಾಧಿಕಾರ : ಪರಿಶೀಲನಾ ಪ್ರಾಧಿಕಾರ ಹಾಗೂ ಅಂಗೀಕರಿಸುವ ಪ್ರಾಧಿಕಾರಗಳನ್ನು ಈ ಆದೇಶದ ಅನುಬಂಧದಲ್ಲಿರುವಂತೆ ಗೊತ್ತುಪಡಿಸಿದೆ.

ಈ ಆದೇಶವು 2003-04ನೇ ಸಾಲಿನಿಂದ ಅನ್ವಯಿಸುವಂತೆ ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಗದೀಶ್ ಜೋಯಿಸ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ನಅಇ 34 ಇಎಂಸಿ 2003, ಬೆಂಗಳೂರು, ದಿನಾಂಕ: 15-12-2003**

1. ನಗರಸಭೆಗಳು ಮತ್ತು ಪುರಸಭೆಗಳಲ್ಲಿ ಕರ್ತವ್ಯ ನಿರ್ವಹಿಸುವ ಕೆಎಂಎಎಸ್ ಅಧಿಕಾರಿಗಳು : ನೌಕರರ ರಹಸ್ಯ ವರದಿ ಬರೆಯುವ ಪ್ರಾಧಿಕಾರಗಳು.

| ಕ್ರ.ಸಂ. | ಹುದ್ದೆಯ ವಿವರಗಳು | ವರದಿ ಮಾಡುವ ಪ್ರಾಧಿಕಾರ | ಪರಿಶೀಲನಾ ಪ್ರಾಧಿಕಾರ | ಅಂಗೀಕರಿಸುವ ಪ್ರಾಧಿಕಾರ |
|---|---|---|---|---|
| 1. | ಪೌರಾಯುಕ್ತರು ಶ್ರೇಣಿ-1 ಮತ್ತು 2 | ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು | ಪೌರಾಡಳಿತ ನಿರ್ದೇಶಕರು | ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ. |
| 2. | ಮುಖ್ಯಾಧಿಕಾರಿ ಶ್ರೇಣಿ-1 ಮತ್ತು 2 | ಸಂಬಂಧಪಟ್ಟ ಜಿಲ್ಲಾಧಿಕಾರಿಗಳು | ಪೌರಾಡಳಿತ ನಿರ್ದೇಶಕರು | ಪೌರಾಡಳಿತ ನಿರ್ದೇಶಕರು. |

2. ನಗರಾಭಿವೃದ್ಧಿ ಪ್ರಾಧಿಕಾರಗಳಲ್ಲಿ ಆಯುಕ್ತರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುವ ಕೆಎಂಎಎಸ್ ಅಧಿಕಾರಿಗಳ ರಹಸ್ಯ ವರದಿ ಬರೆಯುವ ಪ್ರಾಧಿಕಾರಗಳು.

| ವರದಿ ಮಾಡುವ ಪ್ರಾಧಿಕಾರ | ಪರಿಶೀಲನಾ ಪ್ರಾಧಿಕಾರ | ಅಂಗೀಕರಿಸುವ ಪ್ರಾಧಿಕಾರ |
|---|---|---|
| ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು | ಸರ್ಕಾರದ ಕಾರ್ಯದರ್ಶಿಗಳು ನಗರಾಭಿವೃದ್ಧಿ ಇಲಾಖೆ | ಸರ್ಕಾರದ ಕಾರ್ಯದರ್ಶಿಗಳು ನಗರಾಭಿವೃದ್ಧಿ ಇಲಾಖೆ. |

3. ಜಿಲ್ಲಾ ನಗರಾಭಿವೃದ್ಧಿ ಕೋಶಗಳಲ್ಲಿ ಯೋಜನಾ ನಿರ್ದೇಶಕರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುವ ಕೆಎಂಎಎಸ್ ಅಧಿಕಾರಿಗಳ ರಹಸ್ಯ ವರದಿ ಬರೆಯುವ ಪ್ರಾಧಿಕಾರಗಳು.

| ವರದಿ ಮಾಡುವ ಪ್ರಾಧಿಕಾರ | ಪರಿಶೀಲನಾ ಪ್ರಾಧಿಕಾರ | ಅಂಗೀಕರಿಸುವ ಪ್ರಾಧಿಕಾರ |
|---|---|---|
| ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು | ಪೌರಾಡಳಿತ ನಿರ್ದೇಶಕರು | ಸರ್ಕಾರದ ಕಾರ್ಯದರ್ಶಿಗಳು ನಗರಾಭಿವೃದ್ಧಿ ಇಲಾಖೆ. |

4. ಪೌರಸೇವಾ ವೃಂದದ ನೌಕರರ ರಹಸ್ಯ ವರದಿ ಬರೆಯುವ ಪ್ರಾಧಿಕಾರಗಳು

**ನಗರಸಭೆಗಳು:**

| ಹುದ್ದೆಯ ವಿವರಗಳು | ವರದಿ ಮಾಡುವ ಪ್ರಾಧಿಕಾರ | ಪರಿಶೀಲನಾ ಪ್ರಾಧಿಕಾರ | ಅಂಗೀಕರಿಸುವ ಪ್ರಾಧಿಕಾರ |
|---|---|---|---|
| ಗುಂಪು ಬಿ, ಸಿ, ಮತ್ತು ವ್ಯವಸ್ಥಾಪಕರು | ಪೌರಾಯುಕ್ತರು ಶ್ರೇಣಿ-1 ಅಥವಾ ಶ್ರೇಣಿ-2 | ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು | ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು |

**ಪುರಸಭೆಗಳು : ಪಟ್ಟಣ ಪಂಚಾಯತಿಗಳು : ಎನ್‌ಎಸಿ:**

| | | | |
|---|---|---|---|
| ಗುಂಪು ಸಿ | ಮುಖ್ಯಾಧಿಕಾರಿ | ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು | ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು |

**ಜಗದೀಶ್ ಜೋಯಿಸ್**

ಪಿ.ಆರ್. 119 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಮಾಗಡಿ ತಾಲ್ಲೂಕಿನ ಸೋಲೂರು ರೇಷ್ಮೆಗೂಡು ಮಾರುಕಟ್ಟೆಗೆ ಸಿಬ್ಬಂದಿ ಒದಗಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ವಾಕೈ 485 ರೇಸೇವಿ 2001, ದಿನಾಂಕ: 26.3.2002.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಕೈ 465 ರೇಸೇವಿ 2001, ದಿನಾಂಕ: 27.4.2002.

3) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ಸಿಬ್ಬಂದಿ-1:10:ಸಿ:ಪುರ:58: 2002-03, ದಿನಾಂಕ: 4.12.2003.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಮಾಗಡಿ ತಾಲ್ಲೂಕು, ಸೋಲೂರು ಗ್ರಾಮದಲ್ಲಿ ಹಾಲಿ ಸಿಬ್ಬಂದಿಯನ್ನು ಉಪಯೋಗಿಸಿ ಶುದ್ಧ ಮೈಸೂರು ತಳಿ ಬಿತ್ತನೆ ಗೂಡಿನ ಮಾರುಕಟ್ಟೆ ಪ್ರಾರಂಭಿಸಲು ಮೇಲೆ ಓದಲಾದ (1)ರ ಆದೇಶದಲ್ಲಿ ಸೂಚಿಸಲಾಗಿತ್ತು. ತದನಂತರ ಮೇಲೆ (2) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಅನ್ಯಕಾರ್ಯ ನಿಮಿತ್ತ ಆಧಾರದ ಮೇಲೆ ಕಾರ್ಯನಿರ್ವಹಿಸಲು ಈ ಕೆಳಗಿನ ಅಧಿಕಾರಿ : ನೌಕರರನ್ನು ನಿಯೋಜಿಸಲಾಗಿತ್ತು.

(1) ಶ್ರೀ ಡಿ.ಎಂ. ಆಂಜನೇಯಗೌಡ,
ರೇಷ್ಮೆ ಸಹಾಯಕ ನಿರ್ದೇಶಕರು, ರೇಷ್ಮೆ ಗೂಡಿನ ಮಾರುಕಟ್ಟೆ, ವೀರೇಗೌಡನದೊಡ್ಡಿ.

(2) ಶ್ರೀ ಎನ್. ರಾಮಪ್ಪ,
ರೇಷ್ಮೆ ನಿರೀಕ್ಷಕರು, ಮಾದರಿ ಚಾಕಿ ಸಾಕಾಣಿಕಾ ಕೇಂದ್ರ ಸೋಲೂರು.

(3) ಶ್ರೀ ಹೆಚ್.ಎನ್. ಉಮಾಶಂಕರ್,
ರೇಷ್ಮೆ ನಿರೀಕ್ಷಕರು, ಸರ್ಕಾರಿ ದ್ವಿತಳಿ ಗೂಡಿನ ಮಾರುಕಟ್ಟೆ, ಬೆಂಗಳೂರು.

(4) ಶ್ರೀ ಬಿ.ಟಿ. ಹಾಲಸ್ವಾಮಿ,
ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ವೇಮಗಲ್.

(5) ಶ್ರೀ ಶಿವರುದ್ರಪ್ಪ,
ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಕುಣಿಗಲ್.

(6) ಶ್ರೀ ಆರ್. ಚಲುವೇಗೌಡ,
ರೇಷ್ಮೆ ಪ್ರವರ್ತಕರು, ರೇಷ್ಮೆ ಬಿತ್ತನೆ ಕೋಠಿ, ಮಾಗಡಿ.

(7) ಶ್ರೀ ಎಂ. ಮಹದೇವಯ್ಯ,
ರೇಷ್ಮೆ ಪ್ರವರ್ತಕರು, ರೇಷ್ಮೆ ಕೃಷಿ ಕ್ಷೇತ್ರ, ಮಾಗಡಿ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಮೇಲೆ (3) ರಲ್ಲಿ ಓದಲಾದ, ಪತ್ರ ಬರೆಯುತ್ತಾ ಆ ಮಾರುಕಟ್ಟೆಗೆ ಬೇಕಾದ ಹುದ್ದೆಗಳನ್ನು ಸ್ಥಳಾಂತರಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 9 ರೇಸೇವಿ 2004, ಬೆಂಗಳೂರು, ದಿನಾಂಕ: 31ನೇ ಜನವರಿ 2004**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಮಾಗಡಿ ತಾಲ್ಲೂಕು, ಸೋಲೂರು ಗ್ರಾಮದ ರೇಷ್ಮೆ ಗೂಡು ಮಾರುಕಟ್ಟೆಗೆ ಈ ಕೆಳಗಿನಂತೆ ಹುದ್ದೆಗಳನ್ನು ಸ್ಥಳಾಂತರಿಸಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ | ಹುದ್ದೆಗಳನ್ನು ಸ್ಥಳಾಂತರಿಸಲು ಉದ್ದೇಶಿಸಿರುವ ಕಛೇರಿ |
|---|---|---|---|
| 1 | ರೇಷ್ಮೆ ಸಹಾಯಕ ನಿರ್ದೇಶಕರು | 01 | ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ, ಬೆಂಗಳೂರು. |
| 2 | ರೇಷ್ಮೆ ನಿರೀಕ್ಷಕರು | 01 | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ತುರುವೇಕೆರೆ (ಮೂಲತ: ವಿಸ್ತರಣಾ ಹಾಗೂ ಚಾಕಿ ಸಾಕಾಣಿಕ ಕೇಂದ್ರ ಸೋಮವಾರಪೇಟೆ ಹುದ್ದೆ) |
| 3 | ಪ್ರಥಮ ದರ್ಜೆ ಸಹಾಯಕ | 01 | ಕೇಂದ್ರ ಕಛೇರಿ, ರೇಷ್ಮೆ ಇಲಾಖೆ |
| 4 | ರೇಷ್ಮೆ ಪ್ರದರ್ಶಕರು | 01 | ಸೋಲೂರು ವಲಯ |
| 5 | ಡಿ ವೃಂದದ ನೌಕರ | 01 | ತಾಂತ್ರಿಕ ಸೇವಾ ಕೇಂದ್ರ, ಕಬ್ಬಳ್ಳಿ. |

ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಈ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಂಜೇಗೌಡ**

ಪಿ.ಆರ್. 121

ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ:** ಪಿಂಚಣಿ ಯೋಜನೆಗಳ ಸುಧಾರಣೆ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003, ದಿನಾಂಕ: 30ನೇ ಸೆಪ್ಟೆಂಬರ್ 2003.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಪಿಂಚಣಿ ಯೋಜನೆಗಳ ಸುಧಾರಣೆಗೆ ಸಂಬಂಧಿಸಿದಂತೆ ಸರ್ಕಾರವು ಆದೇಶವನ್ನು ಹೊರಡಿಸಿದ್ದು, ನಿವೃತ್ತಿ ವೇತನದ ಪರಿವರ್ತನೆಯ ಧ್ವನಿತ ಸೋಡಿ ದರವನ್ನು (Implicit discount rate) ಶೇಕಡ 4 ರಿಂದ ಶೇಕಡ 8 ರಷ್ಟು ಹೆಚ್ಚಿಸಲಾಗಿದ್ದು ಅದಕ್ಕೆ ಅನುಗುಣವಾಗಿ ಪರಿವರ್ತನಾ ಕೋಷ್ಟಕವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದೆಂದು ತಿಳಿಸಲಾಗಿತ್ತು. ಅದರಂತೆ ಪರಿಷ್ಕೃತ ಪರಿವರ್ತನಾ ಕೋಷ್ಟಕವನ್ನು ನಿಗದಿಪಡಿಸಿ ಈ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ತಿಳಿಸಿದ ಅಂಶಗಳ ಹಿನ್ನೆಲೆಯಲ್ಲಿ ನಿವೃತ್ತಿ ವೇತನದ ಪರಿವರ್ತನಾ ಮೌಲ್ಯದ ಪರಿಷ್ಕೃತ ಕೋಷ್ಟಕವನ್ನು ಈ ಆದೇಶದ ಅನುಬಂಧದಲ್ಲಿ ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಗೋಪಾಲಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸೇವೆಗಳು-1).

**ಅನುಬಂಧ**

**ಪರಿವರ್ತನಾ ಕೋಷ್ಟಕ**

**ಪ್ರತಿ ವರ್ಷಕ್ಕೆ 1 ರೂಪಾಯಿಯ ನಿವೃತ್ತಿ ವೇತನ ಪರಿವರ್ತನಾ ಮೌಲ್ಯಗಳು**

| ಮುಂದಿನ ಜನ್ಮ ದಿನಾಂಕಕ್ಕೆ ಆಗುವ ವಯಸ್ಸು | ವರ್ಷಗಳ ಸಂಖ್ಯಾನುಸಾರ ಪರಿವರ್ತನಾ ಮೌಲ್ಯ ರೂ.ಪೈ | ಮುಂದಿನ ಜನ್ಮ ದಿನಾಂಕಕ್ಕೆ ಆಗುವ ವಯಸ್ಸು | ವರ್ಷಗಳ ಸಂಖ್ಯಾನುಸಾರ ಪರಿವರ್ತನಾ ಮೌಲ್ಯ ರೂ.ಪೈ |
|---|---|---|---|
| 40 | 11.49 | 58 | 8.47 |
| 41 | 11.41 | 59 | 8.14 |
| 42 | 11.32 | 60 | 7.79 |
| 43 | 11.23 | 61 | 7.42 |
| 44 | 11.12 | 62 | 7.01 |
| 45 | 11.02 | 63 | 6.57 |
| 46 | 10.90 | 64 | 6.10 |
| 47 | 10.77 | 65 | 5.59 |
| 48 | 10.63 | 66 | 5.03 |
| 49 | 10.48 | 67 | 4.69 |
| 50 | 10.32 | 68 | 4.31 |
| 51 | 10.15 | 69 | 3.91 |
| 52 | 9.96 | 70 | 3.47 |
| 53 | 9.75 | 71 | 3.00 |
| 54 | 9.54 | 72 | 2.48 |
| 55 | 9.30 | 73 | 1.93 |
| 56 | 9.04 | 74 | 1.34 |
| 57 | 8.77 | 75 | 0.70 |

**ಕೆ.ಎಸ್. ಗೋಪಾಲಕೃಷ್ಣ**
ಪಿ.ಆರ್. 123 ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸೇವೆಗಳು-1).

**ವಿಷಯ:** ಶ್ರೀ ಶಿವಾನಂದ ಆರ್ ಬಂಕೊಳ್ಳಿ, ಅಬಕಾರಿ ಉಪ ಆಯುಕ್ತರು, ಮೈಸೂರು, ಇವರು ಲಂಚ ಸ್ವೀಕರಿಸುವಾಗ ಲೋಕಾಯುಕ್ತ ಪೊಲೀಸರ ಬಲೆಗೆ ಬಿದ್ದಿರುವ ಬಗ್ಗೆ.

**ಓದಲಾಗಿದೆ:** ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್. ಐಎನ್‌ವಿ(ಜೆ). ಸಿಟಿ. ಕ್ರೈಮ್.15/2003, ದಿನಾಂಕ: 30.12.2003.

**ಪ್ರಸ್ತಾವನೆ:**

ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ, ದಿನಾಂಕ: 22.12.2003 ರಂದು ಫಿರ್ಯಾದುದಾರರಾದ ಶ್ರೀ ಎ. ಮುನೀರ್ ಅಹ್ಮದ್, ನಂ.2961, ಸಜ್ಜಾದ್ ರಸ್ತೆ, ಮಂಡಿ ಮೊಹಲ್ಲಾ, ಮೈಸೂರು ಇವರು ಆರಕ್ಷಕ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಇವರ ಮುಂದೆ ಹಾಜರಾಗಿ ಲಿಖಿತ ದೂರೊಂದನ್ನು ನೀಡಿದ್ದು, ಅದರಂತೆ ಫಿರ್ಯಾದುದಾರರಿಗೆ ಸೇರಿದ ಮೈಸೂರಿನ ಬನ್ನೂರು ರಸ್ತೆಯಲ್ಲಿರುವ ಟಿ.ಟಿ. ಫೀಡ್ಸ್ ಕಾರ್ಪೋರೇಷನ್ ಎಂಬ ಫೀಡ್ ತಯಾರು ಮಾಡುವ ಘಟಕ ಇದ್ದು, ಸದರಿ ಘಟಕಕ್ಕೆ ಸಕ್ಕರೆ ಕಾರ್ಖಾನೆಗಳಿಂದ ಕಾಕಂಬಿಯನ್ನು ತರಿಸಿಕೊಂಡು ಫೀಡ್ಸ್‌ಅನ್ನು ತಯಾರು ಮಾಡುತ್ತಿದ್ದು, ಸದರಿ ಘಟಕಕ್ಕೆ ಬೆಂಗಳೂರಿನ ಅಬಕಾರಿ ಆಯುಕ್ತರು 4,000 ಮೆಟ್ರಿಕ್ ಟನ್ ಕಾಕಂಬಿಯನ್ನು ಮಂಜೂರು ಮಾಡಿದ್ದು, ಸದರಿ ಮಂಜೂರಾತಿಯ ನಂತರ ಫಿರ್ಯಾದುದಾರರು 3,000 ಮೆಟ್ರಿಕ್ ಟನ್ ಕಾಕಂಬಿಯನ್ನು ತರಿಸಿಕೊಳ್ಳಲು ಪರವಾನಗಿ ನೀಡುವಂತೆ ಕೋರಿ, ಮೈಸೂರಿನ ಅಬಕಾರಿ ಉಪ ಆಯುಕ್ತರಿಗೆ ಅರ್ಜಿಯನ್ನು ಸಲ್ಲಿಸಿದ್ದು, ಕಾಕಂಬಿಯನ್ನು ಸಾಗಣೆ ಮಾಡಲು ಪರವಾನಗಿ ನೀಡಲು ಮೈಸೂರಿನ ಅಬಕಾರಿ ಉಪ ಆಯುಕ್ತರಾದ ಶ್ರೀ ಶಿವಾನಂದ ಆರ್ ಬಂಕೊಳ್ಳಿ ಇವರು ರೂ.1,50,000-00 ಗಳನ್ನು ಲಂಚವಾಗಿ ಕೇಳಿದ್ದು, ಅದರ ಪೈಕಿ ಈಗಾಗಲೇ ರೂ.85,000-00 ಗಳನ್ನು ಒತ್ತಾಯವಾಗಿ ಪಡೆದಿದ್ದು, ಉಳಿದ ರೂ.65,000-00ಗಳ ಲಂಚದ ಹಣಕ್ಕಾಗಿ ಒತ್ತಾಯಿಸುತ್ತಿದ್ದರು.

ಫಿರ್ಯಾದುದಾರರಿಗೆ ಉಳಿದ ಲಂಚದ ಹಣವನ್ನು ಕೊಟ್ಟು ಕೆಲಸವನ್ನು ಮಾಡಿಸಿಕೊಳ್ಳಲು ಇಷ್ಟವಿಲ್ಲದಿದ್ದ ಕಾರಣ ಲಿಖಿತ ದೂರನ್ನು ದಿನಾಂಕ: 22.12.2003 ರಂದು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಗೆ ಆರೋಪಿಯ ವಿರುದ್ಧ ಕಾನೂನು ಪ್ರಕಾರ ಕ್ರಮ ಕೈಗೊಳ್ಳಲು ನೀಡಿದ್ದರು.

ಈ ದೂರನ್ನು ಆಧರಿಸಿ, ಆರಕ್ಷಕ ಉಪ ಅಧೀಕ್ಷಕರು, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ ಇವರು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ: 15/2003 ಕಲಂ 7,13(1)(ಡಿ) ಜೊತೆಗೆ 13(2) ಲಂಚ ನಿರೋಧ ಕಾಯ್ದೆ 1988ರ ರೀತ್ಯಾ ಆರೋಪಿಯ ವಿರುದ್ಧ ಪ್ರಕರಣವನ್ನು ದಿನಾಂಕ: 22.12.2003 ರಂದು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡರು. ಔಚಿತ್ಯಪೂರ್ವ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ, ಪಂಚ ಸಾಕ್ಷಿಗಳೊಡನೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿ ವರ್ಗದವರು ದಿನಾಂಕ: 22.12.2003 ರಂದು ಮೈಸೂರು ನಗರದ ಕುವೆಂಪು ನಗರದಲ್ಲಿರುವ ಅಬಕಾರಿ ಉಪ ಆಯುಕ್ತರ ಕಛೇರಿಯಲ್ಲಿ ಬೀಸಿದ ಲಂಚದ ಬಲೆಯಲ್ಲಿ ಆಪಾದಿತರಾದ ಶ್ರೀ ಶಿವಾನಂದ ಆರ್ ಬಂಕೊಳ್ಳಿ ಅಬಕಾರಿ ಉಪ ಆಯುಕ್ತರು, ಮೈಸೂರು ಜಿಲ್ಲೆ, ಮೈಸೂರು, ರವರು ಲಂಚದ ಹಣ ರೂ.65,000-00 ಗಳನ್ನು ಫಿರ್ಯಾದುದಾರರಿಂದ ಒತ್ತಾಯಿಸಿ ಕೇಳಿ ಪಡೆಯುತ್ತಿರುವಾಗ ಲಂಚದ ಹಣದ ಸಮೇತ ಸಿಕ್ಕಿ ಬಿದ್ದಿರುತ್ತಾರೆ. ಲಂಚದ ಹಣವನ್ನು ಆಪಾದಿತರ ಪ್ಯಾಂಟಿನ ಬಲಭಾಗದ ಜೇಬಿನಿಂದ ಯಥಾರೀತಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ. ಆರೋಪಿತರ ಎರಡೂ ಕೈಗಳ ಬೆರಳುಗಳನ್ನು ಹಾಗೂ ಲಂಚದ ಹಣವನ್ನು ಇಟ್ಟುಕೊಂಡಿದ್ದ ಪ್ಯಾಂಟಿನ ಬಲಭಾಗದ ಜೇಬಿನ ಒಳಭಾಗವನ್ನು ಸೋಡಿಯಂ ಕಾರ್ಬೋರೇಟ್ ದ್ರಾವಣದಲ್ಲಿ ಪ್ರತ್ಯೇಕವಾಗಿ ಅದ್ದಿಸಿ ತೊಳಿಸಿದಾಗ, ದ್ರಾವಣಗಳು ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿರುತ್ತದೆ. ನೆರಳು ಸಾಕ್ಷಿದಾರರು, ಆಪಾದಿತ ಸರ್ಕಾರಿ ನೌಕರರು ಲಂಚದ ಹಣ ರೂ.65,000-00 ಗಳನ್ನು ಫಿರ್ಯಾದುದಾರರಿಂದ ಒತ್ತಾಯಿಸಿ ಕೇಳಿ ಪಡೆದಿರುವ ಬಗ್ಗೆ ಮಹಜರ್ ಸಮಯದಲ್ಲಿ ನುಡಿದಿರುತ್ತಾರೆ. ತದನಂತರ ಈ ಅಧಿಕಾರಿಯವರನ್ನು ಬಂಧಿಸಿ ನಂತರ ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗಿದೆ.

ಮೇಲೆ ವಿವರಿಸಿರುವ ಕಾರಣ ಹಿನ್ನೆಲೆಯಲ್ಲಿ ಶ್ರೀ ಶಿವಾನಂದ ಆರ್ ಬಂಕೊಳ್ಳಿ, ಅಬಕಾರಿ ಉಪ ಆಯುಕ್ತರು ಇವರ ವಿರುದ್ಧದ ದೂರು ಮೇಲ್ನೋಟಕ್ಕೆ ಸಾಬೀತಾಗಿರುವಂತೆ ಕಂಡುಬಂದಿರುವುದರಿಂದ, ಸುಗಮ, ತನಿಖೆಗೆ ಅಡ್ಡಿ ಉಂಟು ಮಾಡಿ ಹಸ್ತಕ್ಷೇಪ ಮಾಡುವ, ಅವರ ವಿರುದ್ಧ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆ ಇರುವುದರಿಂದ ಅವರನ್ನು ಕೂಡಲೇ ಸೇವೆಯಿಂದ ಅಮಾನತ್ತುಗೊಳಿಸುವಂತೆ ಮತ್ತು ಅವರ ಲೀನ್ ಅನ್ನು ಬೇರೆಡೆಗೆ ವರ್ಗಾಯಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 5 ಇಪಿಎಸ್ 2004, ಬೆಂಗಳೂರು, ದಿನಾಂಕ: 16ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು, ಶ್ರೀ ಶಿವಾನಂದ ಆರ್. ಬಂಕೊಳ್ಳಿ, ಅಬಕಾರಿ ಉಪ ಆಯುಕ್ತರು, ಮೈಸೂರು ಜಿಲ್ಲೆ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ, ನಿಯಮ 10(1) (ಎ) ರನ್ವಯ, ಶಿಸ್ತು ಕ್ರಮದ ವಿಚಾರಣೆ ಬಾಕಿ ಇಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ, ಸೇವೆಯಿಂದ ಅಮಾನತ್ತುಗೊಳಿಸಿದೆ. ಈ ಅಧಿಕಾರಿಯವರು ಹೊಂದಿದ್ದ ಹುದ್ದೆಯ ಲೀನ್ ಅನ್ನು ಅಬಕಾರಿ ಆಯುಕ್ತರ ಕಛೇರಿಯಲ್ಲಿ ಖಾಲಿ ಇರುವ ಉಪ ಆಯುಕ್ತರು (Duty Monitoring cell) ಹುದ್ದೆಗೆ ಸ್ಥಳಾಂತರಿಸಿದೆ.

ಈ ಅಧಿಕಾರಿಯವರು ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ ಮತ್ತು ಸದರಿಯವರು ನಿಯಮಾನುಸಾರ ಜೀವನ ನಿರ್ವಹಣೆ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಶ್ರೀನಿವಾಸನ್**

ಪಿ.ಆರ್. 124 ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಅಬಕಾರಿ).

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಶ್ರೀ ವೈ. ರುದ್ರಮುನಿ, ಅಂದಿನ ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ), ಇವರಿಗೆ ರಜೆ ಮಂಜೂರು ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ದಿನಾಂಕ: 25.1.2002.

2) ಶ್ರೀ ವೈ. ರುದ್ರಮುನಿ, ಅಂದಿನ ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ) ಇವರ ಕೆಎಟಿ ಅರ್ಜಿ ಸಂಖ್ಯೆ: 6669:03, ದಿನಾಂಕ: 28.8.2003 ರಲ್ಲಿ ನೀಡಿದ ತೀರ್ಪು.

**ಪ್ರಸ್ತಾವನೆ:**

ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ:(1) ದಿನಾಂಕ: 25.1.2002ರ ಪತ್ರದಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 265 ಸೇಶಿಕಾ 99, ದಿನಾಂಕ: 10.2.2000 ದಲ್ಲಿ ಶ್ರೀ ಜಿ. ಬಸಣ್ಣ, ಕಾರ್ಯಪಾಲಕ ಇಂಜಿನಿಯರ್ ರವರನ್ನು ಹಡಗಲಿ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗಕ್ಕೆ ಮರುಸ್ಥಳ ನಿಯುಕ್ತಿಗೊಳಿಸಿ ಅಂದು ಅಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ವೈ. ರುದ್ರಮುನಿ, ಅಂದಿನ ಕಾರ್ಯಪಾಲಕ ಇಂಜಿನಿಯರ್ ಇವರನ್ನು ಗುಣನಿಯಂತ್ರಣ ವಿಭಾಗ, ಗುಲ್ಬರ್ಗಕ್ಕೆ ವರ್ಗಾಯಿಸಿದ್ದರಿಂದ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಹಡಗಲಿ ಹುದ್ದೆಯ ಪ್ರಭಾರವನ್ನು ದಿನಾಂಕ: 16.2.2000 ರಂದು ಹಸ್ತಾಂತರಿಸಿ, ಗುಣನಿಯಂತ್ರಣ ವಿಭಾಗ, ಗುಲ್ಬರ್ಗದಲ್ಲಿನ ಕಾರ್ಯಪಾಲಕ ಇಂಜಿನಿಯರ್ ಹುದ್ದೆಯ ಪ್ರಭಾರವನ್ನು ದಿನಾಂಕ: 13.3.2003 ರಂದು ವಹಿಸಿಕೊಂಡು ದಿನಾಂಕ: 16.2.2000 ರಿಂದ 10.3.2000 ರವರೆಗೆ ಅನಾರೋಗ್ಯದ ಕಾರಣ ರಜೆ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿದ್ದರು.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ವರ್ಗಾವಣೆ ಸಮಯದಲ್ಲಿ ವೈದ್ಯಕೀಯ ಮಂಡಳಿಯ ಶಿಫಾರಸ್ಸಿಲ್ಲದೆ, ಸರ್ಕಾರದ ಪೂರ್ವಾನುಮತಿ ಇಲ್ಲದೆ ರಜೆ ಉಪಯೋಗಿಸಿಕೊಂಡು ನಂತರ ವೈದ್ಯಕೀಯ ರಜೆ ಮಂಜೂರು ಮಾಡುವಂತೆ ಅರ್ಜಿ ಸಲ್ಲಿಸಿದ್ದು, ಜವಾಬ್ದಾರಿಯುತ ಅಧಿಕಾರಿಯಾಗಿರುವ ಇವರು ರಜಾ ಅರ್ಜಿ ಪ್ರಪತ್ರದಲ್ಲಿ ದಿನಾಂಕವನ್ನು ನಮೂದಿಸಿರುವುದಿಲ್ಲ. ಹಾಗೂ ವೈದ್ಯಕೀಯ ಪ್ರಮಾಣ ಪತ್ರ ಮತ್ತು ಸಿಟಿಸಿಗಳನ್ನು ನೀಡುವಲ್ಲಿ ಸುಮಾರು 2 ವರ್ಷ ವಿಳಂಬಿಸಿರುತ್ತಾರೆ. ಆದ್ದರಿಂದ ದಿನಾಂಕ: 16.2.2000 ದಿಂದ 12.3.2000 ವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 106-ಎ ಪ್ರಕಾರ ವೇತನರಹಿತ ರಜೆಯೆಂದು ಪರಿಗಣಿಸಲು ಸರ್ಕಾರವು ನಿರ್ಣಯಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 70 ಜಿಪಅ 2002, ಬೆಂಗಳೂರು, ದಿನಾಂಕ: 27ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ವೈ. ರುದ್ರಮುನಿ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಗುಣನಿಯಂತ್ರಣ ವಿಭಾಗ, ಗುಲ್ಬರ್ಗ ಇವರ ದಿನಾಂಕ: 16.2.2000 ದಿಂದ 12.3.2000 ವರೆಗಿನ ಕರ್ತವ್ಯದ ಮೇಲೆ ಗೈರುಹಾಜರಿ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 106-ಎ ಪ್ರಕಾರ ವೇತನರಹಿತ ರಜೆಯೆಂದು ಪರಿಗಣಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಪಿ.ಆರ್. 122

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ದಿನಾಂಕ: 24.10.1980 ಕ್ಕಿಂತ ಪೂರ್ವದ ಅರಣ್ಯ ಭೂಮಿಯಲ್ಲಿನ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ರಚಿಸಿರುವ ತಾಲ್ಲೂಕು ಮಟ್ಟದ ಸಮಿತಿಗಳಿಗೆ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಅಪಜೀ 361 ಎಫ್‌ಜಿಎಲ್ 2002 (ಭಾಗ) ದಿನಾಂಕ: 1.12.2003.
2) ಮುಖ್ಯ ಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ: ಮುಮ:ಆಕಾ:176/04, ದಿನಾಂಕ: 12.1.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿನಾಂಕ: 24.10.1980ರ ಪೂರ್ವದ ಅರಣ್ಯ ಭೂಮಿಯ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ಪ್ರತಿ ತಾಲ್ಲೂಕಿಗೆ ಒಂದರಂತೆ ತಾಲ್ಲೂಕು ಮಟ್ಟದ ಸಮಿತಿಗಳನ್ನು ರಚಿಸಲಾಗಿದೆ. ಈ ತಾಲ್ಲೂಕು ಮಟ್ಟದ ಸಮಿತಿಗಳಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮ ನಿರ್ದೇಶನ ಮಾಡಲು 5 ತಾಲ್ಲೂಕು ಮಟ್ಟದ ಸಮಿತಿಗೆ ಹೆಸರುಗಳನ್ನು ಮೇಲೆ ಓದಲಾದ ಉಲ್ಲೇಖ (2)ರ ಟಿಪ್ಪಣಿಯಲ್ಲಿ ಸೂಚಿಸಲಾಗಿದೆ.

ಅದರಂತೆ ಅಧಿಕಾರೇತರ ಸದಸ್ಯರ ನಾಮ ನಿರ್ದೇಶನವನ್ನು ಮಾಡಲು ಉದ್ದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 24 ಎಫ್‌ಜಿಎಲ್ 2004, ಬೆಂಗಳೂರು, ದಿನಾಂಕ: 29ನೇ ಜನವರಿ 2004**

ದಿನಾಂಕ: 1.12.2003 ರಲ್ಲಿ ರಚಿಸಲಾದ ತಾಲ್ಲೂಕು ಮಟ್ಟದ ಸಮಿತಿಗಳಲ್ಲಿ ಕೆಳಕಂಡ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಕೆಳಕಂಡ ಅಧ್ಯಕ್ಷರು ಮತ್ತು ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮ ನಿರ್ದೇಶನ ಮಾಡಿದೆ.

1. **ಹಾವೇರಿ ತಾಲ್ಲೂಕು:**

**ಶ್ರೀಮತಿ:ಶ್ರೀ**

1. ಬಸವರಾಜ ನಾಗಪ್ಪ ಕುಲಕರ್ಣಿ, ಹಾವೇರಿ ತಾಲ್ಲೂಕು, ಹಾವೇರಿ ಜಿಲ್ಲೆ — ಅಧ್ಯಕ್ಷರು
2. ಶ್ರೀ ಅಶೋಕ ಶಿವಪ್ಪ ಬಣಕಾರ, ಕನಕಪುರ, ಹಾವೇರಿ ತಾಲ್ಲೂಕು, ಹಾವೇರಿ ಜಿಲ್ಲೆ. — ಸದಸ್ಯರು
3. ಅಮಿನಾಬಿ ಕಡಪಾ, ಮುಕ್ಕಾಂ ಹಾವೇರಿ, ಶಿವಾಜಿನಗರ, ಹಾವೇರಿ ಜಿಲ್ಲೆ. — ಸದಸ್ಯರು
4. ಶ್ರೀ ಭೀಮಪ್ಪ ಲಮಾಣಿ, ನಜೀಕಲಕಮಾಪುರ, ಹಾವೇರಿ ತಾಲ್ಲೂಕು. — ಸದಸ್ಯರು

2. **ಸವದತ್ತಿ ತಾಲ್ಲೂಕು:**

1. ಗುರುಲಿಂಗಪ್ಪಾ ತುಪ್ಪದ, ಯರಚುರವಿ, ಸವದತ್ತಿ ತಾಲ್ಲೂಕು. — ಅಧ್ಯಕ್ಷರು
2. ಶಂಕರ ಇಟ್ನಾಳ, ಮುಗಳಿಹಾಳ, ಸವದತ್ತಿ ತಾಲ್ಲೂಕು. — ಸದಸ್ಯರು
3. ಭಾರತಿ ಕಲ್ಲಮ್ಮನವರ, ಅಂಬೇಡಕರ್ ನಗರ, ಸವದತ್ತಿ, ಸವದತ್ತಿ ತಾಲ್ಲೂಕು — ಸದಸ್ಯರು
4. ನಸೀಮಾ ಅಖಿಲ ದಫೇದಾರ್, ಮುನವಳ್ಳಿ, ಸವದತ್ತಿ ತಾಲ್ಲೂಕು. — ಸದಸ್ಯರು

3. **ತೀರ್ಥಹಳ್ಳಿ ತಾಲ್ಲೂಕು:**

1. ಕೆಸ್ತೂರ್ ಮಂಜುನಾಥ್ ಬಿನ್ ದುಗ್ಗಪ್ಪಗೌಡ, ದೂರ್ವಾಸಪುರ ಅಂಚೆ, ತೀರ್ಥಹಳ್ಳಿ ತಾಲ್ಲೂಕು. — ಅಧ್ಯಕ್ಷರು
2. ಕು: ಗುಲಾಬಿ ಬಿನ್ ಬಸವ, ಜಡ್ಡಿನಮಕ್ಕಿ ವಾಸ, ದೇವಂಗಿ ಅಂಚೆ, ತೀರ್ಥಹಳ್ಳಿ ತಾಲ್ಲೂಕು. — ಸದಸ್ಯರು
3. ಮಹೇಶ್ ನಾಯ್ಕ ಬಿನ್ ಶೇಷ ನಾಯ್ಕ, ಅಡ್ಡಗುಡ್ಡೆ ವಾಸ, ಸಿಂಧೂವಾರಿ ಅಂಚೆ. — ಸದಸ್ಯರು

4. ಕೆ.ಡಿ. ಯೋಗೇಂದ್ರ ಬಿನ್ ದುಗ್ಗಪ್ಪಗೌಡ, ಕೆರೆಬೈಲು ವಾಸ, ಮೇಗರವಳ್ಳಿ ಅಂಚೆ, ತೀರ್ಥಹಳ್ಳಿ ತಾಲ್ಲೂಕು. ಸದಸ್ಯರು

4. **ಸಾಗರ ತಾಲ್ಲೂಕು:**

1. ಶಿವಾನಂದ ಕುಗ್ವೆ ಎಸ್. ಬಿನ್ ನಲ್ಲೂರು ಹುಚ್ಚಪ್ಪ, ಕುಗ್ವೆ ಅಂಚೆ, ಸಾಗರ ತಾಲ್ಲೂಕು. ಅಧ್ಯಕ್ಷರು
2. ಜ್ಯೋತಿ ಮುರಳೀಧರ, ಕೋಂ ಮುರಳೀಧರ, ಹೊಸಗುಂದ ವಾಸ, ಸಾಗರ ತಾಲ್ಲೂಕು. ಸದಸ್ಯರು
3. ಗೋಪಾಲ ಬಿನ್ ಶೇಷಣ್ಣ, ಮಾಜಿ ಜಿಲ್ಲಾ ಪಂಚಾಯತ್ ಸದಸ್ಯರು, ಅನೇಂದಪುರಂ, ಸಾಗರ ತಾಲ್ಲೂಕು. ಸದಸ್ಯರು
4. ಜೀನದತ್ತಗೌಡ ಬಿನ್ ದೇವಪ್ಪಗೌಡ, ಸುಳ್ಳಳ್ಳಿ, ಸಾಗರ ತಾಲ್ಲೂಕು. ಸದಸ್ಯರು

5. **ಹೊಸನಗರ ತಾಲ್ಲೂಕು:**

1. ಕಲಗೋಡು ರತ್ನಾಕರ್, ಕಲಗೋಡು, ಕೋಡೂರು ಅಂಚೆ, ಹೊಸನಗರ ತಾಲ್ಲೂಕು. ಅಧ್ಯಕ್ಷರು
2. ಕೆ.ಸಿ. ತೇಜಮೂರ್ತಿ, ಕಲ್ಲೂರು ಹೆದ್ದಾರಿಪುರ ಅಂಚೆ, ಹೊಸನಗರ ತಾಲ್ಲೂಕು. ಸದಸ್ಯರು
3. ಕಲ್ಯಾಣಪ್ಪ ಗೌಡ, ಕಾಳಿಕಾಪುರ, ಹೊಸನಗರ ಅಂಚೆ, ಸದಸ್ಯರು
4. ಎಂ.ಸಿ. ಪಾರ್ವತಿ, ತಾಲ್ಲೂಕು ಪಂಚಾಯತಿ ಸದಸ್ಯರು, ನಿಟ್ಟೂರು ಅಂಚೆ, ಹೊಸನಗರ ತಾಲ್ಲೂಕು. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ವತ್ಸಲ**

ಪಿ.ಆರ್. 125 ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## FOREST, ECOLOGY AND ENVIRONMENT SECRETARIAT

## CORRIGENDUM No: FEE 92 FFM 2002, Bangalore, dated: 29th January 2004

**Subject:** Renewal of mining lease No.1671 in Hiremagi Sulebhavi, Aihole, F.S.No.65, 367 and 166 respectively in Bagalkote Division of Belgaum Circle in favour of M/s Doddannavar Brothers. Belgaum.

**Ref:** 1) G.O.No.FEE 18 FFM 2001, dated: 10.09.2001.
2) Letter No.A5(1)MNG.CR.34/99-2000, dated: 26.12.2003 of the Principal Chief Conservator of Forests, Bangalore.

In subject and order portion of Government Order No.FEE 18 FFM 2001 dated: 10.9.2001 referred at (1) above "the Sy.No.116 shall be read as Sy.No.166".

By Order and in the Name of the Governor of Karnataka,

**S.R. VATSALA**

PR-128 Under Secretary to Government,
Forest, Ecology and Environment Department.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಸಮಾಜ ಕಲ್ಯಾಣ ಇಲಾಖಾ ಆಯುಕ್ತರ ಹುದ್ದೆಯಲ್ಲಿ ಶ್ರೀಯುತ ಕೆ. ಶಿವರಾಮ್‌ರವರನ್ನು ಮುಂದುವರೆಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 501 ಎಸ್‌ಎಎಸ್ 2002, ದಿನಾಂಕ: 15.11.2002.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ದಿನಾಂಕ: 15.11.2002ರ ಸರ್ಕಾರಿ ಅಧಿಸೂಚನೆಯಲ್ಲಿ ಇತರೆ ಐ.ಎ.ಎಸ್. ಅಧಿಕಾರಿಗಳ ಜೊತೆ ಶ್ರೀ ಕೆ. ಶಿವರಾಮ್, ದಾವಣಗೆರೆ ಜಿಲ್ಲಾಧಿಕಾರಿ ಹುದ್ದೆಯಿಂದ ಮುಂದಿನ ಆದೇಶವಾಗುವವರೆಗೆ ಸಮಾಜ ಕಲ್ಯಾಣ ಇಲಾಖಾ ಆಯುಕ್ತರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶವಾಗುವವರೆವಿಗೆ ನೇಮಿಸಿದೆ.

ಜಾರಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸಮಾಜ ಕಲ್ಯಾಣ ಇಲಾಖಾ ನಿರ್ದೇಶಕರ ಹುದ್ದೆಯನ್ನು ಹಿರಿಯ ವೇತನ ಶ್ರೇಣಿಯ ಐಎಎಸ್ ಅಧಿಕಾರಿಯನ್ನು ನೇಮಿಸುವ ಮೂಲಕ ತುಂಬಬಹುದಾಗಿದೆ.

ಆದ್ದರಿಂದ ಶ್ರೀಯುತ ಕೆ. ಶಿವರಾಮ್‌ರವರನ್ನು ಸೂಪರ್ ಟೈಂ ಸ್ಕೇಲ್ ಕಾಲಿಕ ವೇತನ ಶ್ರೇಣಿ ರೂ.18,400-500-22,400 ಹುದ್ದೆಗೆ ನೇಮಕ ಮಾಡಿದ್ದು, ಸದರಿ ಅಧಿಕಾರಿಯು ದಿನಾಂಕ: 25.11.2002 ರಂದು ಪೂರ್ವಾಹ್ನ ಸೇವೆಗೆ ಹಾಜರಾಗಿರುವರು. ಸದರಿ ಅಧಿಕಾರಿಯು ಸೂಪರ್ ಟೈಂ ವೇತನ ಶ್ರೇಣಿಯಲ್ಲಿ 18,400-500-22,400 ಇದರಲ್ಲಿ ವೇತನ ಪಡೆಯಲು ಅನುಕೂಲವಾಗುವಂತೆ ಆಡಳಿತ ಇಲಾಖೆಯು ವಿಷಯವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆಡಳಿತಾತ್ಮಕ ಆದೇಶವನ್ನು ಹೊರಡಿಸಿದೆ.

### ಸರ್ಕಾರಿ ಆದೇಶ ಸಂಖ್ಯೆ: ಸಕಇ 19 ಬಿಇಟಿ 2004, ಬೆಂಗಳೂರು, ದಿನಾಂಕ: 31ನೇ ಜನವರಿ 2004

ಪ್ರಸ್ತಾವನೆಯಲ್ಲಿ ತಿಳಿಯಪಡಿಸಲಾದ ಅಂಶಗಳನ್ನು ಸರ್ಕಾರ ಪರಿಶೀಲಿಸಿ, ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 501 ಎಸ್‌ಎಎಸ್ 2002, ದಿನಾಂಕ: 15.11.2002ರ ಅಧಿಸೂಚನೆಯಲ್ಲಿ ಶ್ರೀಯುತ ಕೆ. ಶಿವರಾಮ್ ಐಎಎಸ್ ಜಿಲ್ಲಾಧಿಕಾರಿ ದಾವಣಗೆರೆ ಜಿಲ್ಲೆ ಇವರನ್ನು ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರ ಸೂಪರ್ ಟೈಂ ಸ್ಕೇಲ್ ಅಂದರೆ ವೇತನ ಶ್ರೇಣಿ 18,400-500-22,400 ಹುದ್ದೆಗೆ ನೇಮಿಸಿದ್ದು, ಅಧಿಕಾರಿಯು ಸದರಿ ಹುದ್ದೆಯ ಕಾರ್ಯಭಾರವನ್ನು ದಿನಾಂಕ: 25.11.2002 ರಿಂದ ಪೂರ್ವಾಹ್ನಯವಾಗಿ ವಹಿಸಿಕೊಂಡಿದ್ದು,

ಸದರಿ ದಿನಾಂಕದಿಂದ ಸದರಿ ಅಧಿಕಾರಿಯು ಸಮಾಜ ಕಲ್ಯಾಣ ಇಲಾಖಾ ಆಯುಕ್ತರಾಗಿ ಮುಂದುವರೆಯುವವರೆವಿಗೆ ಸೂಪರ್ ಟೈಂ ಸ್ಕೇಲ್ ವೇತನ ಪಡೆಯಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೆಹಬೂಬ್ ಪಿರಾನ್**

ಪಿ.ಆರ್. 129 ಸರ್ಕಾರದ ಉಪ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 299 ಎಸ್‌ಎಎಸ್ 2003 ದಿನಾಂಕ: 4.9.2003.

2. ಮಹಾಲೇಖಪಾಲರು (ಲೆಕ್ಕಪತ್ರ) ಕರ್ನಾಟಕ, ಬೆಂಗಳೂರು ಇವರ ಪತ್ರ ಸಂಖ್ಯೆ: ಜಿಎಂ:ಐಎಎಸ್‌ಐ:ವಿಬಿ:848–49, ದಿನಾಂಕ: 14:17.11.2003.

**ಪ್ರಸ್ತಾವನೆ:**

ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 4.9.2003ರ ಅಧಿಸೂಚನೆಯಲ್ಲಿ ಶ್ರೀಮತಿ ಉಷಾ ಗಣೇಶ್, ಐ.ಎ.ಎಸ್. ಇವರನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿರುತ್ತದೆ.

ಈ ಕಾರಣದಿಂದಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಶ್ರೀಮತಿ ಉಷಾ ಗಣೇಶ್, ಐ.ಎ.ಎಸ್. ಇವರು ಕಾರ್ಯವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಬಗ್ಗೆ ಹಾಗೂ ಈ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 5 ಸಸಿವಿ 2004, ಬೆಂಗಳೂರು, ದಿನಾಂಕ: 29ನೇ ಜನವರಿ 2004.**

ಕರ್ನಾಟಕ ಸರ್ಕಾರ ಸಚಿವಾಲಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಶ್ರೀಮತಿ ಉಷಾ ಗಣೇಶ್, ಐ.ಎ.ಎಸ್. ಇವರು ಕಾರ್ಯವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿ: ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸಲಾಗಿದೆ. ಹಾಗೂ ಈ ಹುದ್ದೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000, ದಿನಾಂಕ: 8.6.2001 ರಲ್ಲಿ ನಿಗದಿ ಪಡಿಸಿರುವ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:31.3.2005 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಕಡತ ಸಂಖ್ಯೆ: ಸಿಆಸುಇ 84 ಸಸಿವಿ 2003 ರಲ್ಲಿ ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 2015 ವೆಚ್ಚ–5:2003, ದಿನಾಂಕ: 20.11.2003 ರಲ್ಲಿ ನೀಡಿರುವ ಸಹಮತಿಯ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ.ಪ್ರಭು**

ಪಿ.ಆರ್. 130 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು–2).

## ಆರ್ಥಿಕ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಸಾಂಪ್ರದಾಯಿಕ ಲಾಟರಿ ಸಮಿತಿಗೆ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 117 ಸಲುಲಾ 97, ದಿನಾಂಕ: 08.09.2000.

2) ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಸಉಲಾ(1)2/2002-03, ದಿನಾಂಕ: 22.05.2003.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಅಧಿಸೂಚನೆ ದಿನಾಂಕ: 08.09.2000 ರಲ್ಲಿ ಕರ್ನಾಟಕ ರಾಜ್ಯ ಲಾಟರಿ ನಿಯಮಗಳು 1999 ಅನ್ನು ಹೊರಡಿಸಿದ್ದು, ಸದರಿ ನಿಯಮಗಳ 4ನೇ ನಿಯಮದಲ್ಲಿ ರಾಜ್ಯ ಲಾಟರಿಯನ್ನು ನಡೆಸಲು ಸಮಿತಿಯನ್ನು ರಚಿಸಲಾಗಿದೆ. ಡ್ರಾ ಸಂದರ್ಭದಲ್ಲಿ ಸಮಿತಿ ಸದಸ್ಯರ ಕೊರತೆಯನ್ನು ನಿವಾರಿಸುವ ಮತ್ತು ವಾರದ ಎಲ್ಲಾ 7 ದಿನಗಳು ಲಾಟರಿ ನಡೆಸುತ್ತಿರುವ ಕಾರಣ ಉಂಟಾಗುತ್ತಿರುವ ಅಡೆತಡೆಗಳನ್ನು ನಿವಾರಿಸುವ ಸಲುವಾಗಿ ನಿಯಮಗಳ ತಿದ್ದುಪಡಿಯನ್ನು ಬಾಕಿ ಇಟ್ಟು ಈ ಸಮಿತಿಯಲ್ಲಿ ಸಹಾಯಕ ನಿರ್ದೇಶಕರು, ರಾಜ್ಯ ಲಾಟರಿ, ಇವರನ್ನು ಸದಸ್ಯರನ್ನಾಗಿ ನೇಮಿಸಿ ಆದೇಶ ಹೊರಡಿಸಲು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆ, ಇವರು ಸರ್ಕಾರವನ್ನು ಕೋರಿದ್ದಾರೆ. ಈ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಇ 255 ಸಲುಲಾ 2002, ಬೆಂಗಳೂರು, ದಿನಾಂಕ: 22ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಲಾಟರಿ ನಿಯಮಗಳು 1999ಕ್ಕೆ ತಿದ್ದುಪಡಿ ತರುವುದನ್ನು ಬಾಕಿ ಇಟ್ಟು ಸದರಿ ನಿಯಮಗಳ 4 ರಲ್ಲಿರುವ ಕರ್ನಾಟಕ ರಾಜ್ಯ ಲಾಟರಿ ಡ್ರಾ ಸಮಿತಿಗೆ ಸಹಾಯಕ ನಿರ್ದೇಶಕರು, ರಾಜ್ಯ ಲಾಟರಿ, ಕರ್ನಾಟಕ ಸರ್ಕಾರ, ಇವರನ್ನು ಸದಸ್ಯರನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಪ್ರಭಾಕರ್**

ಪಿ.ಆರ್. 132

ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು).

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಶ್ರೀ ಎಸ್.ಎಲ್. ನಂಜೇಗೌಡ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಮದ್ದೂರು, ಮಂಡ್ಯ ಜಿಲ್ಲೆ, ಇವರ ವಿರುದ್ಧ ಇಲಾಖಾ ವಿಚಾರಣೆಗಾಗಿ ವಿಚಾರಣಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ರಾಜ್ಯ ಚುನಾವಣಾ ಆಯೋಗ, ಕರ್ನಾಟಕ, ಬೆಂಗಳೂರು ಇವರ ಪತ್ರದ ಸಂಖ್ಯೆ: ರಾಚುಅ:88:ಇಜಿಪಿ:2000, ದಿನಾಂಕ: 20.11.2002.

2) ಜಿಲ್ಲಾಧಿಕಾರಿ, ಮಂಡ್ಯ ಜಿಲ್ಲೆ, ಮಂಡ್ಯ ಇವರ ಪತ್ರದ ಸಂಖ್ಯೆ: ಇಎಲ್‌ಎನ್(2):34:02-03, ದಿ: 20.6.03.

3) ಸರ್ಕಾರದ ಕಾರಣ ಕೇಳುವ ನೋಟೀಸ್‌ನ ಸಮ ಸಂಖ್ಯೆಯ ದಿನಾಂಕ: 16.9.2003.

4) ಆರೋಪಿತರ ಲಿಖಿತ ಹೇಳಿಕೆ ದಿನಾಂಕ: 28.11.2003.

ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ಅಣ್ಣೂರು ಗ್ರಾಮ ಪಂಚಾಯತಿಗೆ 2000ನೇ ಸಾಲಿನಲ್ಲಿ ನಡೆದ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ ಕಾರ್ಯಕ್ಕೆ ಗೊತ್ತುಪಡಿಸಿದ ಅಧಿಕಾರಿಯಾದ ಶ್ರೀ ಎಸ್.ಎಲ್. ನಂಜೇಗೌಡ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಮದ್ದೂರು, ಮಂಡ್ಯ ಜಿಲ್ಲೆ, ಇವರು ಕರ್ತವ್ಯ ಲೋಪವೆಸಗಿದ್ದು, ಸದರಿ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ರಾಜ್ಯ ಚುನಾವಣಾ ಆಯೋಗದ ಅಧೀನ ಕಾರ್ಯದರ್ಶಿಯವರು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಕೋರಿದ್ದರು.

ಶ್ರೀ ಎಸ್.ಎಲ್. ನಂಜೇಗೌಡ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಮದ್ದೂರು, ಮಂಡ್ಯ ಜಿಲ್ಲೆ. ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಸಂಬಂಧ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸುವಂತೆ ಮಂಡ್ಯ ಜಿಲ್ಲೆ, ಜಿಲ್ಲಾಧಿಕಾರಿಯವರನ್ನು ಕೋರಲಾಗಿ, ಸದರಿಯವರ ವಿರುದ್ಧದ ದೋಷಾರೋಪಣಾ ಪಟ್ಟಿಯನ್ನು ಅನುಬಂಧ-1 ರಿಂದ 4 ರಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಪ್ರಕಾರ ಸಲ್ಲಿಸಿದ್ದರು.

ಸದರಿಯವರ ವಿರುದ್ಧದ ದೋಷಾರೋಪಣೆಯನ್ನು ಅನುಬಂಧ-1 ರಿಂದ 4 ರಂತೆ ಕಾರಣ ಕೇಳುವ ನೋಟೀಸ್ ನೊಂದಿಗೆ ಆರೋಪಿತರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಪ್ರಕಾರ ಜಾರಿ ಮಾಡಲಾಗಿತ್ತು. ಆರೋಪಿತರು ಸದರಿ ದೋಷಾರೋಪಣೆಗಳಿಗೆ ಲಿಖಿತ ಹೇಳಿಕೆ ಸಲ್ಲಿಸಿ, ಉತ್ತರ ನೀಡಲು ಕೆಲವು ಮಾಹಿತಿಗಳನ್ನು ಒದಗಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಪತ್ರದಲ್ಲಿ ಕೋರಿದ್ದರು.

ಸದರಿ ಆರೋಪಿತರು ಕೋರಿರುವ ದಾಖಲಾತಿಗಳನ್ನು ಸಂಬಂಧಪಟ್ಟ ಕಛೇರಿಯಲ್ಲಿ ಕಛೇರಿಯ ಅಧಿಕಾರಿಯ ಸಮಕ್ಷಮ ನೋಡಬಹುದೆಂದು ಅವರಿಗೆ ಪತ್ರ ಹೊರಡಿಸಿ ಈ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 13 ಜಿಪಅ 2003, ಬೆಂಗಳೂರು, ದಿನಾಂಕ: 24ನೇ ಜನವರಿ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕಿನ ಅಣ್ಣೂರು ಗ್ರಾಮ ಪಂಚಾಯತಿಗೆ 2000ನೇ ಸಾಲಿನಲ್ಲಿ ನಡೆದ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ ಕಾರ್ಯಕ್ಕೆ ಗೊತ್ತುಪಡಿಸಿದ ಅಧಿಕಾರಿಯು ಕರ್ತವ್ಯ ಲೋಪವೆಸಗಿದ್ದಾರೆನ್ನಲಾಗಿರುವ ಆರೋಪಗಳಿಗೆ ಸಂಬಂಧಿಸಿದಂತೆ ಶ್ರೀ ಎಸ್.ಎಲ್. ನಂಜೇಗೌಡ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಮದ್ದೂರು, ಮಂಡ್ಯ ಜಿಲ್ಲೆ, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಮತ್ತು ಉಪ ಕಾರ್ಯದರ್ಶಿ (ಆಡಳಿತ) ಜಿಪಂ, ಮಂಡ್ಯ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ವಿಚಾರಣಾಧಿಕಾರಿಯವರು 3 ತಿಂಗಳೊಳಗಾಗಿ ವಿಚಾರಣೆ ಮುಗಿಸಿ, ವಿವರವಾದ ವರದಿಯನ್ನು ಸಲ್ಲಿಸುವಂತೆ ತಿಳಿಸಲಾಗಿದೆ. ವಿಚಾರಣಾಧಿಕಾರಿಯವರು ವಿಚಾರಣಾ ವರದಿ ಸಲ್ಲಿಸಿದ ನಂತರ ನಿಯಮಾನುಸಾರ ಸಂಭಾವನೆಯನ್ನು ಪಾವತಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಪಿ.ಆರ್. 133

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.